ಮನೋಹರ ಗ್ರಂಥ ಪ್ರಕಾಶನ ಸಮಿತಿಯ

ಹೊಸ ಬಿಡಿಮುತ್ತು ೧

# ಸಖೀಗೀತ



ಅಂಬಿಕಾತನಯ ದತ್ತ



೧೯೪೦

# ಸಂದರ್ಭಸೂಚನೆ

' ಗುರುದೇವ 'ನು ಕವೀಂದ್ರ ರವೀಂದ್ರನೆಂದರೆ ಅರ್ಥವು ಗಮ್ಯವಾದೀತು. ಇದು ಗುರುವಿಗೆ ನಮನ. ' ಶಾಂತಿ 'ಯಲ್ಲಿ ಸಮಾಧಾನಕ್ಕೆ ಆವ್ಹಾನವಿದೆ. ' ಮಾಯಾಕಿನ್ನರಿ 'ಯ ಹಿನ್ನೆಲೆಗೆ ಒಂದು ಕಥೆ ಇದೆ. ಕಾಡಸಿದ್ಧ-ಮರುಳಸಿದ್ಧ ಎಂಬ ಮಹಾತ್ಮರೊಬ್ಬರು ಉತ್ತರ ದಿಗ್ವಿಜಯ ತೀರಿಸಿ ದಕ್ಷಿಣದಲ್ಲಿ ಕರ್ನಾಟಕಕ್ಕೆ ಬಂದರು. ಆಗ ಕೊಲ್ಲಾಪುರದ ಮಾಯೆಯೆಂಬ ಯೋಗಿನಿಯು ಸಾವಿರ ಯೋಗಿಗಳನ್ನು ಸೋಲಿಸಿ ತನ್ನ ಮನೆಯಲ್ಲಿ ಊಳಿಗದಾಳುಗಳನ್ನಾಗಿ ಕೆಲಸಕ್ಕೆ ಹೂಡಿದುದನ್ನು ಕೇಳಿದರು. ಮಾಯೆಯೊಡನೆ ಇವರ ವಾಗ್ವಾದವು ಅನೇಕ ದಿನ ನಡೆದು ಮಾಯೆಯು ಎಲ್ಲ ವಿಷಯದಲ್ಲಿ ಸಿದ್ಧರಿಗೆ ಸೋತಳು. ಅದರಿಂದ ಅವಳು ಕುಪಿತಳಾಗಿ ಮಂತ್ರ-ತಂತ್ರದಿಂದಾ

ದರೂ ಅವರನ್ನು ಗೆಲ್ಲಲು ಹವಣಿಸಿದಳು. ಸಿದ್ಧರು ಮಾಯೆಯನ್ನೆ ಮಂತ್ರಬಲದಿಂದ ಕಿನ್ನರಿಯನ್ನಾಗಿ ಮಾಡಿ ಹೊತ್ತುಕೊಂಡು ಹೊರಟರು. ಮೊದಲಸಲ ಆ ಕಿನ್ನರಿಯನ್ನು ಬಾರಿಸಬೇಕೆಂದಾಗ ಪ್ರಣಯ-ಕುಪಿತ ಮಾನಿನಿಯಂತೆ ಅದು ಸಿಡಿಮಿಡಿಗೊಂಡಿತು, ಶ್ರುತಿಗೊಡಲಿಲ್ಲ; ಆಗ ಸಿದ್ಧರು ಮಾನಿನಿಯನ್ನು ಒಲಿಸಿಕೊಳ್ಳುವಂತೆ ಮಾಯೆಯನ್ನು ಒಲಿಸಿಕೊಳ್ಳಲು, ಗೆಜ್ಜೆ-ಪೈಜಣ ಕಟ್ಟಿದ ಮಾಯೆಯೆ ಕಿನ್ನರಿಯ ಮೈಯಲ್ಲಿ ನಿಂತು ಜಗವು ಬೆರಗಾಗುವಂತೆ ದಿವ್ಯಸಂಗೀತವನ್ನು ಹೊರಸೂಸಿದಳು. 'ತುಂಬಿ ಬಂದಿತ್ತು' ಈ ಪದ್ಯದ ಸಂದರ್ಭ ಹೀಗಿದೆ: ಈ ಹಾಡು ಬಸವಣ್ಣನವರ ಜೀವನದ ಕೊನೆಯ ದಿನಗಳಿಗೆ ಸಂಬಂಧಿಸಿದ " ತಲೆದಂಡ " ಎಂಬ ನಾಟಕದೊಳಗಿನದು. ರಾಯಮುರಾರಿಯ ಕಣ್ಣೆದಿರು ಬಸವಣ್ಣನವರ ಸಮಾಧಿಯ ಕೆಲಸ ನಡೆದಿರುವಾಗ ಮುದುಕ ಜಂಗಮನೊಬ್ಬನು ತನ್ನ ಸ್ವಾನುಭವದ ಈ ಹಾಡನ್ನು ಹೇಳುತ್ತಿರುವನು. ರಾಯಮುರಾರಿಗೆ ಅದು ಬಿಜ್ಜಳ-ಬಸವಣ್ಣನವರ ಚರಿತೆಗೂ ಕಾಲಕ್ಕೂ ಅನ್ವಯಿಸುವದೆಂದು ತೋರುವದು. ಸುತ್ತಲಿದ್ದವರಿಗೂ, ಸಭಿಕರಿಗೂ ಹಾಗೆಯೇ ತೋರುವದು. " ತಲೆದಂಡ "ದ ಕೊನೆಯ ಪದ್ಯವೇ ಇದು. ಇದರೊಳಗಿನ ಮೂರು ನುಡಿಗಳಲ್ಲಿಯೂ ಬರುವ 'ತುಂಬಿ ಬಂದಿತ್ತು' ಎಂಬ ಮಾತಿಗೆ ಒಂದೊಂದು ನುಡಿಯಲ್ಲಿ ಒಂದೊಂದು ಅರ್ಥವಿದೆ. ೧. ತುಂಬಿಕೊಂಡು ಬಂದಿತ್ತು. ೨. ದುಂಬಿ-ಭ್ರಮರವು ಬಂದಿತ್ತು. ೩. ಕಾಲವು ತುಂಬಿ ಬಂದಿತ್ತು. ಹಾಡನ್ನು ಕಿನ್ನರಿಯೊಡನಾಗಲಿ, ಏಕದಾರಿಯೊಡನಾಗಲಿ ಹೇಳಿದರೆ ಸೊಗಸು ಹೆಚ್ಚು. ನಾಟಕದಲ್ಲಿ ಅದು ಹಾಗೆ ಹೇಳಲಾಗುವದು. ನಾಮಸ್ಮರಣೆಯ ಪ್ರಾರಂಭದ ಸುಖವನ್ನು ಕಾಳರಾತ್ರಿಯ ವಿರಹದಲ್ಲಿ 'ಆ ದಿನ ನೆನೆದು' ಹಂಬಲಿಸಿ ಮುಂದಿನ ಪರಿಣಾಮಕ್ಕೆ ಹಾರಯಿಸಿದ್ದಾಗಿದೆ. 'ಕೈ ತಾ ಬಾ' ಎಂಬುದು ಜಗದ ರೂಪ-ರೂಪವನ್ನೂ ರೂಪಿಸುವ ಸೌಂದರ್ಯ-ಶಕ್ತಿಯನ್ನು ಕುರಿತು ಇದೆ. 'ಮನಸುಖರಾಯನ

ಮಗಳು ' ಬಾಹ್ಯ-ಸೌಂದರ್ಯಕ್ಕೆ ಮನಸೋತಿದ್ದಾಳೆ, ಒಳ-ಸೌಂದರ್ಯ
ವನ್ನು ಕಾಣದಾಗಿದ್ದಾಳೆ. ಬಾಹ್ಯದ ಹೊಟ್ಟೆಯಲ್ಲೂ ಅಂತರ್ಯದ
ಗುಟ್ಟು ಇರುವದನ್ನೂ ಮನಸ್ಸು ಕಾಣಬೇಕು. ' ಸರ್ವಂ ಖಲ್ವಿದಂ
ಬ್ರಹ್ಮ '. ' ಕವಿಕಲ್ಪನೆ 'ಯು ಸೀರಿಗಿಂತ ಶಾಂತ, ನಿದ್ರೆಗಿಂತ
ಮೋಹಕವಾಗಿಲ್ಲವೆ ? ಛಂದೋ-ಗತಿಯನ್ನು ಕಂಡು ಈ ಕವನ ಹೇಳ
ಬೇಕು. ' ನಿದ್ದೆ ' ಯ ಸಂಹಾರಕ-ಸ್ವರೂಪದ ನಾಲ್ಕು ನೆಲೆಗಳನ್ನು
ಇಲ್ಲಿ ಗುರುತಿಸಿದ್ದಾಗಿದೆ. ಬೇಸತ್ತ ಕಲ್ಪನೆಯು, ಆಟವಾಡಿ ದಣಿದ
ಹುಡುಗ ತಾಯಿ-ಮಡಲಿಗೆ ಬರುವಂತೆ ರಾತ್ರಿಗೆ ಮೊರೆಹೋಗುವದ-
ಲ್ಲವೆ ? ಜೋಳದ ಕಡ್ಡಿ(ದಂಟು)ಗೆ ಸುತ್ತಿರುವ ಸೊಪ್ಪೆಯನ್ನು ಚಿಕ್ಕಂ
ದಿನಲ್ಲಿ ಊದಿ ಆನಂದಿಸಿದವರು ' ರವದಿ 'ಯ ಅರ್ಥವನ್ನು ಸ್ವಾರಸ್ಯ-
ಪೂರ್ಣವಾಗಿ ಕಾಣಬಹುದು. ' ಜೇನು ಹುಟ್ಟು ' ' ಆನಂದವೇ '
ಈ ಎರಡು ಕವನಗಳಲ್ಲಿ ಹರ್ಷಾನುಭವದ ಎರಡು ಪರಿಗಳ ಎರಡು
ಭಾವಲಹರಿಗಳಿವೆ. ದಿವಂಗತ ಸಕ್ಕರಿ ಬಾಳಾಚಾರ್ಯರು ಕವಿಗಳಿರು
ವಂತೆ ಕೀರ್ತನಕಾರರೂ ಆಗಿದ್ದರು. ' ರಕ್ಷಿಸು ಕರ್ನಾಟಕ ದೇವಿ '
ಎಂಬ ಅವರ ಪದ್ಯ ಕೇಳಿದವರಿಗೆ ಅವರ ಕನ್ನಡ ಭಕ್ತಿ ತಿಳಿದಿದೆ. ಅವರು
ದಿವಂಗತರಾದಾಗ್ಗೆ ಬರೆದ ಪದ್ಯಗಳಿವು. ದಾರಿದ್ರ್ಯದ ದುರ್ದೈವ
ವನ್ನೂ ಸಮಾಜದ ಕುರುಡುತನವನ್ನೂ ಅನುಭವಿಸಿದವರು 'ತಿರುಕ'ನ
ಹೃದಯ ತಿಳಿಯಬಲ್ಲರು. ಕಾವ್ಯ-' ಪರಾಗ 'ವು ರಸಿಕ ಭ್ರಮರನಿ
ಗಾಗಿಯೇ ಕಾಯ್ದುಕೊಂಡಿದೆ. 'ವಸಂತಮುಖ'ವು ವಸಂತ ಪ್ರಾರಂಭ
ವನ್ನು ವರ್ಣಿಸುವದು. ಹೂತಂಥ ಹುಣಿಸೆಮರವನ್ನು ನೋಡಿ
ಊಹೆಗೆ ಬಂದ ಚಿತ್ರದ ಸಾಲೊಂದು ಮುಂದಿನ ಪದ್ಯದಲ್ಲಿ ವರ್ಣಿತ-
ವಾಗಿದೆ. ಚಿತ್ರವು ಸಂಚಾರಾಂತ್ಯದಲ್ಲಿ ತಾನೆ ಶಾಂತಿಯ ಸ್ಥಾಯಿ
ಯನ್ನು ಮುಟ್ಟಿದೆ. ' ಚಿತ್ರಾ ' ನಕ್ಷತ್ರದ ಮಳೆಯ ನಂತರ ಸಂಜೆಗೆ
ತೋರಿದ 'ಸಾಧನಕೇರಿ'ಯ ಸೊಬಗನ್ನು ' ಕುರುಡು ಚಿತ್ತಿಯ ಮಳೆ '
ಯಲ್ಲಿ ಸೂಚಿಸಿದ್ದಾಗಿದೆ. ಮುಂದಿನ ಎರಡು ಪದ್ಯಗಳು ನನ್ನ ಒಂದು

# ಪರಿವಿಡಿ

# ಗುರುದೇವ

ನುಡಿದು ಬೇಸತ್ತ್ಯಾಗ । ದುಡಿದುಡಿದು ಸತ್ತ್ಯಾಗ
ಜನಕ ಹಿಗ್ಗಿನ ಹಾಡು ನೀಡಾಂವಾ
ನಿನ್ಹಾಂಗ ಆಡಾಕ । ನಿನ್ಹಾಂಗ ಹಾಡಾಕ
ಪಡೆದು ಬಂದವ ಬೇಕೊ ಗುರುದೇವಾ

ಮಕ್ಕಳಾಗ್ಯಾಡೀದಿ । ಹಕ್ಕ್ಯಾಗಿ ಹಾಡೀದಿ
ಚಿಕ್ಕ್ಯಾಗಿ ನೋಡೀದಿ ಗುರುದೇವಾ
ಬಳ್ಳ್ಯಾಗ ಕುಣಿದೀದಿ । ಬೆಳಕಿನ್ಯಾಗ ತಣಿದೀದಿ
ಹೂವಾಗಿ ಅರಳೀದಿ ಗುರುದೇವಾ

ಬೆಳಿಯಾಗೀಸಾಡೀದಿ । ಗಾಳ್ಯಾಗ ಬೀಸಾಡೀದಿ
ಮಳಿಯಾಗ ಕೂಸಾಡೀದಿ ಗುರುದೇವಾ
ಬಿಸಿಲ್ಹಣ್ಣು ಉಂಡೀದಿ । ಬೆಳದಿಂಗಳ ಕಂಡೀದಿ
ಚಳಿಮುದ್ದು ಕೊಂಡೀದಿ ಗುರುದೇವಾ

ಮೂಡಲಕ ಮೂಡೀದಿ । ಪಡುವಲಕ ಓಡೀದಿ
ದಿಕ್ಕೆಲ್ಲ ಕೂಡೀದಿ ಗುರುದೇವಾ
ಹಾಡಿ ಹಣ್ಣಾದಿ ನೀ । ಜಗದ ಕಣ್ಣಾದಿ ನೀ
ದುಡಿದು ಸಣ್ಣಾದಿ ನೀ ಗುರುದೇವಾ

## ಶಾಂತಿ

ಏ! ಬಾ, ಬಾರೆ ಗುಣವಂತಿ ॥ ಪಲ್ಲ ॥

ತಳಕಿತ್ತಿ ಓಡೆಲೆ। ತಳವೂರಿದ ಚಿಂತಿ
ನಿಲ್ಲೆಲೆ ಚಿರಶಾಂತಿ ॥ ಅ. ಪ. ॥

ತಂಬೂರಿ ತುಂಬೆಲ್ಲಾ
ಕೇಸರ ಬಾಸರ
ಬೇಸರ ಬಂದೈತಿ

## ಸಖೀಗೀತ

ಆ ಸರ ಈ ಸರ
ತಲೆಗೊಂದು ತರತರ
ಬಾಯ್ ಬಿಡತಾವ ತಂಽತಿ

ಎದಿ-ಗುಡಿ ಉಡುಗಿತ್ತ
ಮನ ಮಡಿ ಮಾಡಿತ್ತ
ಕಣ್ ಕದಾ ಮುಚ್ಚ್ಯೈಽತಿ
ಬಿರುಗಾಳಿ ಬೀಸಿತ್ತ
ಬಾಗಿಲ ತೆರೆದಿತ್ತ
ನೆರೆದಿತ್ತ ಹುಡಿ ಸಂಽತಿ

ಕರೆದಾರಿ ನಾಲಿಗಿ
ನಿನ್ನೆದೆ ಹಾಲಿಗಿ
ಬಾಯಾಸೆ ಬಿಡತೈಽತಿ
ಬಾಯಾರಿ ಕಾಯಲೊ
ಹಸಿವೇರಿ ಸಾಯಲೊ
ಹೇಳೊಮ್ಮೆ, ಏನಂಽತಿ ?

ಇದ್ದದ್ದು ಬರಿ-ದಾರಿ
ಬುದ್ದೀದು ಉರಿ-ದಾರಿ
ನಿದ್ದ್ಯೊಂದು ಹರದಾಽರಿ
ದಣುವಿನ ವ್ಯಾಲ್ದಣಿವು
ಜನುಮದ್ದು ಬಿತ್ತ್ಹೆಣವು
ಹೋದಲ್ಲೆ ನೀ ನಿಂಽತಿ

# ಮಾಯಾಕಿನ್ನರಿ

ಮುರುಳು ಮಾಡಾಕ ಹೋಗಿ ಮರುಳಸಿದ್ಧನ ನಾರಿ
ಮರುಳಾಽಗ್ಯಾಳ ಜಂಗಮಯ್ಯಗ
ಕಿನ್ನರಿ ಆಗ್ಯಾಳ ಕೈಯ್ಯಾಗ
ಮಿಡಿದಾಳ ಬಂದ್ಹಾಂಗ ಮೈಯ್ಯಾಗ ॥ ಪಲ್ಲ ॥

ಆಡುತಾಡುತ ಬಂದು ಸಿಂಗಾರಸೊಳ್ಳೀ ಹಾಂಗ
ಹಾಡಿಲೆ ಕಿವಿಗಲ್ಲ ಕಡಿದ್ಯೇನ
ಹಾದಿ ತಪ್ಪಿಸಿಕೊಂಡ ಗುಂಗಿಯ ಹುಳಧಾಂಗ
ಗುಣುಗುಣು ಗೊಣಗುಟ್ಟಿ ನುಡಿದ್ಯೇನ
ತನ್ನೊಡೆಯನ ಕೂಡ ಚಿನ್ನಾಟ ನಡಿಸೀದ
ಕುನ್ನಿ ಕುಙ್‌ಗುಡುವಾಟ ಹಿಡಿದ್ಯೇನ
ಮುಟ್ಟಿದರ ಮುರುಕುವ ವಯ್ಯಾರ ಕಲಿತೆಲ್ಲಿ
ಸುಳ್ಳಽನ ಸಿಡಿಮಿಡಿ ಸಿಡಿದ್ಯೇನ

ಎದಿಗೊತ್ತಿ ಹಿಡಿದರು ಮುತ್ತಿಟ್ಟು ಮುತ್ತಿಷ್ಟು
ಮುಳುಮುಳು ಸುಮ್ಮನೆ ಅತ್ತೇನ
ಕೈಯಾಡಿಸಿದಂತೆ ಮೈಕದ್ದು ನಡುಗುವಿ
ಇದು ಹೊಸ ಗಮಕದ ಗತ್ತೇನ
ಮೊದಲ ಬೆಟ್ಟಿಗೆ ಬಂದ ಮಳ್ಹೆಣ್ಣು ಮಾಡಿಧಾಂಗ
ತುಟಿಕಚ್ಚಿ ತಡವರಿಸಿ ತಡದೇನ
ತಂತ್ಯಲ್ಲ; ಜೀವದ ತಂತು ನೀ. ಅಂತsನ
ಶ್ರುತಿ ಹಿಡಿದು ಜತಿ ಹಿಡಿದು ನಡದೇನ

ಕಂಕಣ ಕಾಲುಂಗರಕ ಮೆಲ್ಲ ಸಿರ-ಭಂದಕ
ಕುಣಿತಾನ ನಡೆಧಾಂಗ ಕಾಲಾsಗ
ಕರಗಿ ಬಾ, ಅರಗಿ ಬಾ, ಎರಗಿ ಬಾ, ಸಣ್ಣಾಗಿ
ಸಕ್ಕರಿ ಬೆರೆಧಾಂಗ ಹಾಲಾsಗ
ನಂಬಿಸಿ ರಂಬಿಸಿ ಚುಂಬಿಸಿ ಎದೆಗೊಂಬಿ
ಬಿಂಬೀಸಿ ಎದೆಯೊಳಗ ಅಂಧಾಂsಗ
ಝುಣಣ ಮಿಡಿದಾವ ತಂತಿ; ಗೆಜ್ಜಿಪೈಜಣ ಕಟ್ಟಿ
ಮಾಯೆಯೆ ಮೈಯೊಳಗ ಬಂಧಾಂsಗ

ಅಗಲಿದ ಇನಿಯನ ಫಕ್ಕನೆ ನೋಡುತ
ಬಸಿರ ಹೂ ಕುಲುಕುಲು ನಕ್ಕ್ಹಾಂಗ
ನಲ್ಲ ಮುಟ್ಟಿದ ಗಲ್ಲ, ನಲ್ಲೆಯು ಮೈಯೆಲ್ಲ
ಹಿಗ್ಗಿನ ಮುಳ್ಳಿಗೆ ಸಿಕ್ಹಾಂಗ
ಜುಮ್‌ಜುಮು ರುಮುಜುಮು ಗುಂಗುಣು ದುಮುದುಮು
ನಾದದ ನದಿಯೊಂದು ನಡೆಧಾಂಗ
ಗಲ್ಲಗಲ್ಲಕೆ ಹಚ್ಚಿ ನಲ್ಲನಲ್ಲೆಯರಿರುಳು
ಗುಜುಗುಜು ಗುಲುಗುಲು ನುಡಿಧಾಂಗ

## ಸಖೀಗೀತ

ಸಂಜೀಯ ಮುಗಿಲಾಗ ರೊಞ್‌ಬಿಲ್ಲ ಪಟವೊಂದು
ಗಾಳಿ-ಸುಳಿಗೆ ಶ್ರುತಿ ಹಿಡಿಧಾಂಗ
ಗಗನಸಂಚಾರದ ನಾರದನ ವೀಣೆಯ
ಹಾಡೀನ ತೆರಿತೆರಿ ಒಡಿಧಾಂಗ
ಮಂಕಾಗಿ ಮೂಕಾದ ಮನದ ಮಿಡುಕಾಟದ
ಮೊಗ್ಗಿಗೆ ಬಾಯಿಲ್ಲಿ ಒಡಿಧಾಂಗ
ಹೆಣ್ಗಂಡು ಜೇನ್ನೊಣ ಮುದ್ದಾಡಿ ಕಚ್ಚಾಡಿ
ಹೂಜೇನ ಹನಿಹನಿ ಕುಡಿಧಾಂಗ

ಆತನೀತನವಂತ ಯಾತನದ ಯಾತನೆಯ
ಯಾತ ಕಿರುಗುಟ್ಟ್ಯೋದು ನಿಂಧಾಂಗ
ನಾನೀನ ನುಡಿ ನುಂಗಿ ತಾನೀನ ತಾನೆ ತಾ
ತಾನಾಗಿ ತನನಽನ ಬಂಧಾಂಗ
ರಂಗೊಂದು ದಂಗೊಂದು ಗುಂಗೊಂದು ಒಂದಕ್ಕೊಂದು
ಹತ್ತ್ಯಾಗಿ ಜತ್ತ್ಯಾಗಿ ಸುಳಿಧಾಂಗ
ದಣಿದ ಜೀವದ ಮ್ಯಾಲೆ ಜೇನಿನ ಸುರಿಮಳಿ
ಜೇಂಗುಟ್ಟಿ ಹನಿಹನಿ ಇಳಿಧಾಂಗ

•

ಪ್ರಕೃತಿ ಪುರುಷಗೆ ಸೋತು ಪ್ರಾಣಂದ್ಧಜಿಯೆ ಸೂತು
ಅನುಭವದ ಕಿವಿಮಾತು ಆಧಾಂಗ
ಹಾಸಾದ ಹಾಡೀಗೆ ಹೊಕ್ಕ್ಯಾತು ಕಿನ್ನರಿ
ನೆಯ್ಗಿಯೊಳಗ ನೂಲು ಹೋಧಾಂಗ
ಜೀವದ ರಸ ಹಿಂಡಿ ತುಂತೂರು ಮಳಿಯಾಗಿ
ತಂತಿಯ ತುಂಬೆಲ್ಲ ಸಿಡಿಧಾಂಗ
ಮರುಳ ಸಿದ್ದನ ಕೈಯ್ಯ ಕಿನ್ನರಿಯಾಗಿ ಸಿಕ್ಕ
ಮಾಯೆಯ ಮೈಗೆ ಮೈ ನುಡಿಧಾಂಗ

# ತುಂಬಿ ಬಂದಿತ್ತು

ತುಮ್ ತುಮ್ ತುಮ್ ತುಮ್ ತುಮ್ ತುಮ್ ತುಮ್ ತುಮ್
ತುಂಬಿ ಬಂದಿತ್ತs ತಂಗೀ
ತುಂಬಿ ಬಂದಿತ್ತು ॥ ಪಲ್ಲ ॥

ಬೆಳಕಿಗಿಂತ ಬೆಳ್ಳಗೆ ಇತ್ತ
ಗಾಳಿಗಿಂತ ತೆಳ್ಳಗೆ ಇತ್ತ
ಜಡಿಯಿಂದಿಳಿದ ಗಂಗಿ ಹಾಂಗ
ಚಂಗನೆ ನೆಗೆದಿತ್ತ
ಮೈಯೊಳಗಿರುವ ಮೂಲಿಮೂಲಿಗೂ
ಮೂಡಿ ಬಂದಿತ್ತ
ಅಡಿಮುಡಿಗೂಡಿ ನಡುವಂತೆಲ್ಲಾ
ಮುಳಿಗಿಸಿ ಬಿಟ್ಟಿತ್ತs ತಂಗೀ
ತುಂಬಿ ಬಂದಿತ್ತು ॥ ತುಮ್ ತುಮ್

ಹೂವಿಗಿರುವ ಕಂಪು ಇತ್ತ  
ಹಾಡಿಗಿರುವ ಇಂಪು ಇತ್ತ  
ಜೀವದ ಮಾತು ಕಟ್ಟಿಧಾಂಗ  
ಎದ್ಯಾಗ ನಟ್ಟಿತ್ತ  
ಮರ್ಮದ ಮಾತು ಆಡಿದ್ಹಾಂಗ  
ಮರ್ಮಕ ಮುಟ್ಟಿತ್ತ  
ಬೆಳಕಿಗೆ ಮರಳಿ ಕಮಲವರಳಿ  
ಜೇನ ಬಿಟ್ಟಿತ್ತಽ ತಂಗೀ  
        ತುಂಬಿ ಬಂದಿತ್ತು ॥ ತುಮ್‌ತುಮ್

ಕಾಲದ್ಹಾಂಗ ಕಪ್ಪಗಿತ್ತ  
ಸಾವಿನ್ಹಾಂಗ ತೆಪ್ಪಗಿತ್ತ  
ಹದ್ದು ಒಂದು ಹಾವಿನ ಮ್ಯಾಲೆ  
ಎರಗಿದಂತಿತ್ತ  
ಇರುಳು ಮಬ್ಬಿನಾಗ ಹಗಲಿನ ಬೆಳಕು  
ಕರಗಿದಂತಿತ್ತ  
ಗುಂಗು ಹಿಡಿದು ತಂಗಿದಾಗ  
ತುಂಬಿ ನಿಂತಿತ್ತಽ ಈಗ  
        ತುಳಿಕಿ ಹೋಗಿತ್ತ  
        ತಂಗೀ ತುಂಬಿ ಬಂದಿತ್ತು ॥ ತುಮ್‌ತುಮ್

# ಆ ದಿನ ನೆನೆದು

ಭಾಸಹಾಸಗಳಲ್ಲಿ ಜೀವ ತೇಲುತ್ತಿರಲು
ನಿನ್ನ ನಾಮವು ಬಂತು ಸಿಡಿಲು ಸಿಡಿದಂತೆ
ಹೇಸಿಗೆಯು ಹೂವ ಮೂಸಿಡುವ ತುಂಬಿಗೆ ದೂರ-
ದಲ್ಲಿರುವ ಸಂದನದ ಕಂಪು ಬಡಿದಂತೆ

ಪ್ರೇಮಸಂಕೇತಗಳನೆಂದು ಧಾಳಾಧೂಳಿ-
ಯಿಂದ ಕುಣಿದೆನು ನಾನು ವ್ರಾತ್ಯಶುಕದಂತೆ
ಮಾಮರಸ ಚಿಗುರನ್ನು ಕನಸಿನಲ್ಲಿಯೆ ಕಂಡು
ಕಣ್ಮುಚ್ಚಿ ಕುಕಿಲುತಿಹ ತರುಣ ಪಿಕದಂತೆ

ಹಿರಿ ಬೆಳಕು ಬರುತಿಹುದು, ಸರುಗಂಪ ತರುತಿಹುದು
ಇನ್ನು ಇಂದಿಗು ಗುಪ್ತಗಂಗೆ ಹರಿದಂತೆ
ಅರಿತಿಲ್ಲ ಆ ಸ್ನೇಹ, ಮರೆತಿಲ್ಲ ಆ ನೆನಹು,
ಏಕೆಯಿರುವದೊ ಮೊದಲಿಗಿದ್ದಕಿದ್ದಂತೆ

'ಒಂದೆ ಒಂದೇ' ಎಂದು ರಸಸಿದ್ಧಿಗಾಗೆಂದು
ಸಿದ್ಧನಾಗಾರ್ಜುನನು ತಿರುಗಿದಂತೆ
'ಒಂದೆ ಮಾತಾಡು ಪತಿ' ಎಂದು ವಿರಹಿಣಿ ತನ್ನ
ಮೃತ್ಯುಶಯ್ಯೆಯ ಮೇಲೆ ಮರುಗಿದಂತೆ

ಇಂದು ಎನ್ನುತ್ತಿರುವೆ ಗುಟುಕು ಕೊಡು ತೊಟಕು ಕೊಡು,
ಆತ್ಮಘಾತಕಿಯಾದ ಕಾಡಬೇಗೆ
ಸಂದಿಸ್ಯೆ, ಭಕ್ತಿಯಲಿ ಸಂಧಿಸ್ಯೆ, ಕುಡಿವೆ ನಾ
ಹಸಿದು ಒಂದವ ಹಾಲು ಕುಡಿದ ಹಾಗೆ

# ಬಾ ಕೈ ತಾ

ಮನಸಿನಲ್ಲಿ ಹೊಳೆದವನೆ
ಕನಸಿನಲ್ಲಿ ಬೆಳೆದವನೆ
ಜೀವನವನೆ ತೊಳೆದವನೆ
ಎಲ್ಲಿರುವೆ ಬಾ!
ಚೆಲುವಿನಲ್ಲಿ ಮಾಗಿರುವೆ
ಒಲವಿನಲ್ಲಿ ಬಾಗಿರುವೆ
ಜಗದ ರೂಪವಾಗಿರುವೆ
ಕೈಗೆ ಕೈಯ ತಾ!
ಹಳ್ಳ ಹೊಳೆಗೆ ಸೂಗಿದಾಗ
ಹೂ ಹೂವಿಗೆ ತಾಗಿದಾಗ
ಹಕ್ಕಿ ಕೆರಳಿ ಕೂಗಿದಾಗ
ಮೂಡಿದವನೆ ಬಾ!
ಗಂಡು-ಹೆಣ್ಣು ಕೂಡಿದಾಗ
ತಾಯಿ ಕೂಸ ನೋಡಿದಾಗ
ಜೀವ ಸೆಲೆಯು ತೋಡಿದಾಗ
ಬಹನೇ ಕೈ ತಾ!
ಕಿರಣ ಹಸಿರ ಮುದ್ದಿಡುತಿರೆ
ಬಿಂಬಿ ಬಸಿರ ಬಗೆದು ಬರೆ
ತುಂಬಿ ತನ್ನ ಗುಂಗಿನೊಳಿರೆ
ಕುಣಿಗವನೇ ಬಾ!
ಕಣ್ಣು ಕಣ್ಣ ಸೆಳೆಯುತಿರೆ
ಮಳೆಗೆ ಮಣ್ಣೆ ಮೊಳೆಯುತಿರೆ
ಮೋಡ ಬಿಲ್ಲ ತಳೆಯುತಿರೆ
ಚಾಚಿದ ಕೈ ತಾ!

# ಮನಸುಖರಾಯನ ಮಗಳು

ಗೌರಿಹುಣ್ಣಿಮೆ ಬಂತು ಕಾರ ದುರ್ದಿನ ನಿಂತು;
ಹಾರಿ ಹಾತೊರೆದು ಗೋಳಾಡುತಿಹೆನು
ಅರಸುಮಗಳಿಗು ಹೊರಗೆ ಹೋಗಗೊಡರೈ! ನನ್ನ
ಕನ್ನೆಮಾಡದಿ ಕೂತು ನೋಡುತಿಹೆನು

ಎತ್ತೆತ್ತ ತೆರೆದಿರುವ ಹತ್ತು ಕಿಟಕಿಗಳಿಂದ
ಒತ್ತೊತ್ತಿ ಬರುತಿರುವ ನೋಟಗಳನು
ಎಷ್ಟು ದಿವಸನುಭವಿಸಿ ಕಡೆಗೆ ಕಳೆಯಲುಬಹುದು
ಸೃಷ್ಟಿ ಚದುರಿಯ ಮಾಟ ಮಾಟಗಳನು

* * * *

ಓಲಾಡುತಿವೆ ಹಕ್ಕಿ ತೇಲಾಡುತಿವೆ ಹಕ್ಕಿ
'ಗೌರಿಹುಣ್ಣಿಮೆ ಬಂತು ಬಂತು' ಎಂದು
ಹಾರಾಡುತಿವೆ ಮತ್ತೆ ಚೀರಾಡುತಿವೆ ತಿಳಿದು
ತಮ್ಮ ಜನ್ಮವಿದೊಂದು ಹಬ್ಬವೆಂದು

ಹಕ್ಕಿಗಳ ಬಳಗವನ್ನೆಲ್ಲ ರೆಕ್ಕೆಯು ಬಲದಿ
ಜಿಕ್ಕಿ ಹಾರುವದೆಂಬ ಹರ್ಷದಿಂದ
ಚೊಕ್ಕ ಬೆಳ್ಳಿಯ ಕಂಕ ಕಿಂಕಿಲಿಸಿ ನುಡಿಸುತಿದೆ
ದಿಕ್ಕುದಿಕ್ಕನು ಧ್ವನಿಯ ಸ್ಪರ್ಶದಿಂದ

ಚೀಚಿಚೀ ಚೀಚಿಚೀ ಚಿಚಿಚಿಚೀ ಚೀಚಿ ಚಳಿ-
ಗಾಲದಾರತಿಯೊರೆವ ಕರಿಯ ಗುಬ್ಬಿ
ಚೀಚಿಚಿಲಿಪಿಲಿಗುಡುವ ಗುಬ್ಬಿಗಳ ಮುಂದೆ ಬಿಳಿ-
ಗರಿ ಸೆಟೆಸಿ ಕುಣಿಯುತಿದೆ ಉಬ್ಬಿಯುಬ್ಬಿ

ಬರುವ ಸುಗ್ಗಿಯ ಕೂಗು ಕಲಿತು ಇಡಬೇಕೆಂದು
ಈಗಿಂದ ಕೋಗಿಲೆಯು ಕುಕಿಲುತಿಹುದು
ಕರಿಕಾಗೆ ಕಾವ್‌ಗುಡಲು ಕೆಂಗಾಗೆ ಗೂಗಿಡುವ
ನೋಟ ನಡುಹಗಲೊಳಗೆ ಕಾಣಬಹುದು

ಹಿಂಗಾರಿ ಮಳಿಯಾಸೆಯಿಂದ ಹಾರುತ್ತಿರುವ
ಚಾತಕದ ಆತುರತೆ ಚೆಂದವಾಯ್ತು
ತಿಂಗಳನ ಹಾಲ್ಕುಡಿದು ಜಾಗರದಿಯೊರೆಯುವ ಚ-
ಕೋರ ರವ ಬೆಳಗಿನಲಿ ಮಂದವಾಯ್ತು

*   *   *   *

ಉಗುರುಬೆಚ್ಚಗೆ ಬಿದ್ದ ಬಿಸಿಲು ಗಾಳಿಗೆ ನಡುಗೆ
ಚಳಿಯು ಮುಂಚೂಣಿಯೆಂದೆನಿಸುತಿಹುದು
ಹಗುರಾಗಿ ಚಾರುವಿರುಳನ್ನು ಕಾಣುತ ಜೀವ
ಬೇಸಿಗೆಯ ರಾತ್ರಿಯನು ನೆನೆಸುತಿಹುದು

ಹಲವು ಬಣ್ಣದ ಸಂಜೆ ದಿಗಲುಬಡಿಸುತ ಬರಲು
ಜೀವಕೋಟಿಯ ಮೈಯ ದಣಿವು ಹೋಯ್ತು
ನೆಲವು ಪಚ್ಚೆಯ ಹೊಲವು, ಮುಗಿಲು ಹೀರಕದ ಮನೆ
ಅಡವಿಗಡವಿಯೆ ಹೊನ್ನ ಬಣಿವೆಯಾಯ್ತು

ಅಮೃತದರವಟ್ಟಿಗೆಯೊ, ಹಾಲ ಆಲೀಮನೆಯೊ,
ಎಂಬಂತೆ ಬೆಳ್ದಿಂಗಳಿದ್ದ ಇರುಳು
ಅಮೃತಾನುಭವವಾಗಿ ಅರಗುಟುಕು ಆದಂತೆ
ಎನಿಸಿ ಕೊರಗುವದೆಲ್ಲ ಜನರ ಕರುಳು

ಚಿಕ್ಕಿ ಚಕ್ಕನೆ ಹೊಳೆದು ಬಿಳಿಮೋಡಗಳ ಮುಸುಕು
ಹೊಕ್ಕು ಫಕ್ಕನೆ ಮತ್ತೆ ಹೊರಗೆ ಬಂದು
ನಕ್ಕು ನಗಿಸುತ್ತಲಿವೆ ಅಕ್ಕರದ ನೋಟಕರ—
ಚಿಕ್ಕಮಕ್ಕಳ ಆಟ ಸ್ಮೃತಿಗೆ ತಂದು

ಸೊಂಪುಳ್ಳ ಸೇವಂತಿಗಂಪು ಪೇರಲಗಂಪು
    ಬಂತು, ಬಿಡದಿರಲು ಮುಂಜಾವ ಜೊಂಪು
ತಂಪುಗಾಳಿಯು ಕೂಡ ಕುಣಿಯುತ್ತ ಹಾಡುತ್ತ
    'ಹಂಪುಗಾಲದ ಸೆಂಪು ಸೊಂಪು ಸೊಂಪು'

* * * *

ಗೊಲ್ಲತಿಯು ನಾನಾಗಿ ಅಲೆದಾಡಿ ಬೀದಿಯಲಿ
    ತಿರಿದು ಈಚಲಚಾಪೆ ಹೆಣೆಯುಬಹುದು
ಒಲ್ಲಂತೆ ನಾನು ನಾಡಾಡಿ ಡೊಂಬತಿಯಾಗಿ
    ಗಣಿಮಿಣಿಗಳನ್ನೇರಿ ಕುಣಿಯುಬಹುದು

ತಿರಿಪೆ ಅನ್ನವೆ ಇರಲಿ ಹರಕು ಅರಿವೆಯೆ ಬರಲಿ
    ಓರಿಗೆಯ ಮೈಯೊಡನೆ ತಿರುಗಬಲ್ಲೆ
ನೆರಳನ್ನು ಬಿಟ್ಟೆಲ್ಲೊ ತಿರುಳಿ ಮೈಗರೆದಿರಲು
    ಅಂಥ ಒಗೆತನವನ್ನು ಮರೆಯೊ ಒಲ್ಲೆ

ಆ ಅನಾಹತದ ಸಂಗೀತ ಕೇಳುವದೆಂದೊ?
    ಮುದ್ದು ನುಡಿಗಾಗಿ ಹಸಿದಿಹುದು ಕಿವಿಯು
ನಾ ಅರಸಿ; ನೀ ಅರಸ. ಉಚ್ಚೈಸೀಚನೆ ಬರಲಿ.
    ಒಗರಿರುವ ವರೆಗಂತು ಹುಳಿಯೆ ಸವಿಯು

ನಾನು ಮನಸುಖರಾಯನೆಂಬ ರಾಜನ ಮಗಳು
    ನರಳುತಿಹೆ ಬಂಧನವ ಅಡಸಿಕೊಂಡು
ಏನಾರೆ ಮಾಡಿ ಯಾರಾರೆ ಬಂದಿಲ್ಲಿಂದ
    ಎಲ್ಲಾದರೂ ಹೋಗಿ ಬಿಡಿಸಿಕೊಂಡು

ತೆರೆದ ಕರಣವ ಮುಚ್ಚಿ ಮರೆಯು ದೈವವನರಸಿ
    ಇಷ್ಟುದಿನ ಬಳಲಿದುದು ಅಷ್ಟೆ ಸಾಕು
ಧರೆಯ ಸಿರಿ ಸೂರೆ ಹೋಗುತ್ತಿರಲು ಬರ ಏಕೆ?
    ಕಣ್ಣ ಚೆಲುವನು ಮೊದಲು ಉಣ್ಣಬೇಕು

# ಕವಿಕಲ್ಪನೆ

(ನೀರು) “ ಬಿಸಿಲಿಗೆ ಬೇಸತ್ತು
ಹೋದೆನು ಭೂಮಿಯನ್ನು ಬಿಟ್ಟು
ಮೋಡವಾಗಿ ಮೇಲೆ
ಚರಿಸುವೆ ನಭದೊಳಗಾಮೇಲೆ
ಚಂದ್ರ ಸೂರ್ಯರನ್ನು
ಮುಸಕುವೆ ನಿಮಿಷದೊಳಗೆ ನಾನು
ಚಿಕ್ಕ ಚಿಕ್ಕಗಳನು
ಉದರಃು ಉದರದಿ ಹಿಡಿಯುವೆನು
ಶಾಂತಿ ಮಾಡುವವರು
ಭೂಮಿಗೆ ನಾನಲ್ಲದೆ ಯಾರು ? ”

*        *        *        *

(ನಿದ್ರೆ) ರಣ ರಣ ರಣ ಬಿಸಿಲು;
ಸುತ್ತಲು ಬರಿ ಬಿಸಿಲೇ ಬಿಸಿಲು

ಎತ್ತ ನೋಡಿದರೂ
ಬಿಸಿಲೇ ಬಿಸಿಲು ಕೆಳಗೆ ಮೇಲೂ;
ಕೆರೆ ಹೊಳೆ ಹಳ್ಳಗಳು
ಜಗದೊಳಗೆಲ್ಲಾ ಬತ್ತಿರಲು
ಪಾಂಥನು ಬಂದಿರಲು
ಕೊಡುವದು ಆಶ್ರಯವನು ನೆಳಲು
ಮಲಗಿರಲವನಲ್ಲಿ,
ಕನಸನು ಕಂಡನಷ್ಟರಲ್ಲಿ;
ಹೂವಿನ ತೋಟಗಳು
ಹೆಣ್ಣಿನ ಕಣ್ಣಿನ ನೋಟಗಳು
ಹರಿಯುವ ಹಳ್ಳಗಳು
ತಾವರೆ ತುಂಬಿದ ಕೊಳ್ಳಗಳು
ನವರತ್ನದ ಮಹಲು
ಕಳಸವೆ ಮುಟ್ಟಿತದರ ಮುಗಿಲು
ಸಾವಿರಾರು ಕನಸು
ಕಂಡನು. ಮರುಳಾಯಿತು ಮನಸು
ಇಂತಹ ಮೋಹಕರು
ಇಳೆಯೊಳು ಅವಳಲ್ಲದೆ ಯಾರು?

*    *    *    *

ಕವಿಕಲ್ಪನೆಯಲ್ಲೇ?
ಇದನ್ನೂ ಅವಳೇ ಕಟ್ಟಿಲ್ಲೇ?
ಶಾಂತಳು ಮೋಹಕಳು
ಜಗದಲಿ ಅವಳೊಬ್ಬಳೆ ಇಹಳು

# ನಿದ್ದೆ

ಮೂಡುವೆಳೆನೇಸರನ ಕಮಲಮುಖ ಕಂಡಿಲ್ಲ
ಹಾಡುವೆಳೆಹಕ್ಕಿಗಳ ಹಾಡುಗಳ ಕೇಳಿಲ್ಲ
ಆಡುವೆಳೆಮಕ್ಕಳೊಡನಾಡಿಲ್ಲ, ಓಡುವೆಳೆ-
ಕರುಗಳೊಡನೋಡಲಿಲ್ಲ

ನೋಡಿದ್ದ ಕನಸನ್ನೆ ತಿರುತಿರುಗಿ ನೋಡುತ್ತ
ಬೇಡಿದ್ದರೂ ಮತ್ತೆ ಬೇಡಿದ್ದ ಹಾಗಾಗಿ
ಕಾಡಿದ್ದ ಕೇಡಿದ್ದ ಬಾಡಿದ್ದ ನಿದ್ದೆಯೊಡ-
ಗೂಡಿದ್ದೆ ಕಾಮಿಯಂತೆ

ಸೊಲ್ಲಿದ್ದರೂ ನುಡಿಯು ಸೊಗಸು ಸಿಗದೆಂದಿಗೂ
ಬಲ್ಲಿದ್ದರೂ ಬಲ್ಲತನಕೆ ಸಲ್ಲಾಗುವದು
ಎಲ್ಲಿದ್ದರೂ ಬಂದು ಗಂಟುಬಿದ್ದಿದ್ದ ನಿ-
ದ್ದೆಯ ಸಂಗ ಸಾಕು ಸಾಕು

ಒಲ್ಲೆನಿಸಿ ಒಮ್ಮೊಮ್ಮೆ ನನ್ನ ಎದೆಗುಂಡಿಗೆಯು
ಝಲ್ಲೆನಿಸಿ ಬೆಚ್ಚಿ ಎಚ್ಚರಿಯೆ ಮೆಚ್ಚನು ಕೊಚ್ಚಿ
ಕಲ್ಲೆನಿಸಿದಂತೆ ಮಾಡುವಳು ಇವಳೇ ನಿದ್ರೆ,
ಕಲ್ಪಾಂತ ಕಾಲ ರೌದ್ರೆ

ನಿದ್ದೆ ಪಂಚೇಂದ್ರಿಯಕೆ ಪಂಚತ್ವವೀವಂಥ
ವಿದ್ಯೆಯಿದು, ರಾಕ್ಷಸರು ಜಗಕೆ ಕಟ್ಟಿದ ರಕ್ಷೆ
ನಿದ್ದೆ ಸಂಸಾರಸಾರವನು ಹೀರುವ ಜಿಗಳಿ
ಸುಖ ನುಂಗುವಂಥ ನೆಗಳೆ

ನಿದ್ದೆಯೆಂದರೆ ಕಣ್ಣು-ಕಟ್ಟು ಮಾಡುವ ಮೋಡಿ
ನಿದ್ದೆಯೆಂದರೆ ಕಲ್ಲುಮಾಡ ಜಡೆದಿಹ ಬೇಡಿ
ನಿದ್ದೆಯೆಂದರೆ ಸಪ್ಪಗಿಹ ಸಾವು, ಮಾಗಿಯೊಳು
ಮುಡಿಯ ಮಲಗಿದ್ದ ಹಾವು

ಏ ನಿದ್ದೆ! ಏನಿದ್ದೆ! ಏನಾದೆ ನೀನು ಹಾ!
ಏನು ಸಂಜೀವನೀ! ಜೀವಹರಳಾದೆ ನೀ!
ಏನಿದ್ದೆ! ಎಲೆ ನಿದ್ದೆ! ಇಕೊ ಬಿದ್ದೆ! ಎದ್ದಿದ್ದೆ!
ಧಡಡ ಕಡಕೊಂಡು ಬಿದ್ದೆ!

ಏ ನಿದ್ದೆ! ಏನಿದ್ದೆ? ಏನಾದೆ ನೀನು ಹೇ!
ಏನು ಸಂಜೀವಕನು ನಿರ್ಜೀವನಾದನೇ!
ಏ ನಿದ್ದೆ! ಎಲೆ ನಿದ್ದೆ! ಬಿದ್ದಿದ್ದೆ! ಇಗೋ ಎದ್ದೆ!
ಝಾಡಿಸಿದೆನಿದ್ದ ನಿದ್ದೆ!

# ರಾತ್ರಿಗೆ—

[ಮುಗಿಲಂಗಳವಲ್ಲಿ ಕೂಡಹತ್ತಿರುವ ಮೋಡಗಳ ಕಡೆಗೆ ನಿರ್ಹೇತುಕವಾಗಿ ನೋಡುತ್ತಿರುವಾಗ, ಮನಸ್ಸಿಗೆ ಒಲ್ಲೆನಿಸುತ್ತಿದ್ದರೂ, ಪರ್ಯುತ್ಸುಕತೆಯು ವಿಷವಂತೆ ಅಂತಃಕರಣವನ್ನೆಲ್ಲ ತುಂಬಹತ್ತಲು, ಪ್ರಸವೀಶಕ್ತಿಯ ಸ್ಥಿತಿಯು ಏನಾಗುತ್ತಿದ್ದೀತು ? ]

ನಾಲಿಗಿಲ್ಲದ ಗಂಟೆಯಂತಾಯಿತೀ ಬಾಯಿ,
ಜಾಲದೊಳು ಸಿಕ್ಕ ಹಕ್ಕಿಯವೊಲಾಯಿತು ಮನವು,
ತಾಲವಿರಹಿತವಾಯಿತರ್ಥವೂ ಶಿವಶಿವಾ !
ಜೀವ ನಿರ್ಜೀವವಾಯ್ತು

ವಿವಿಧ ಬಣ್ಣಗಳಾಟ ಕಾಣಿಸದು ಕಂಗಳಿಗೆ,
ನವರಸದ ಸಂಗೀತ ಕೇಳಿಸದು ಕಿವಿಗಳಿಗೆ,
ಸವಿಯನರಿಯದು ಜಿಹ್ವೆ, ಪರಿಮಳಂಗಳ ತಾರ-
ತಮ್ಯ ತಿಳಿಯದು ಮೂಗಿಗೆ

ವಿಶ್ವಮೋಹನಕರೀ! ಶ್ರೀ ನಿಶಾದೇವಿಯೇ!
ನಶ್ವರದ ಪರಿಚಯವು ಬಹಳಾಯ್ತು. ಇನ್ನೆನಗೆ
ಶಾಶ್ವತದ ಪದದೋರು, ನಿದ್ರೆ ಮರಣಗಳೆಂಬ
ಮೊಲೆಯುಣಿಸು; ಬಂದೆ ನಾನು

ಹಸಿದು ಬಂದಿಹೆನುಣಿಸು, ನೀರಡಿಸಿ ಬಂದಿಹೆನು
ತುಸು ನೀರ ಕುಡಿಸೆನಗೆ, ತೂಕಡಿಸಿದೊಡನೆ ನಾ
ಹೊಸಲಾಲಿಯನ್ನಂದು ನಿನ್ನ ತೊಡೆಯನು ಹಾಸಿ
ಮಲಗಿಸೆನಗದರ ಮೇಲೆ

ಹುಣ್ಣಿಮೆಯ ಚಂದ್ರಮನು ಹಲವು ಸಲ ಕೃತ್ತಿಕೆಯ
ಹೆಣ್ಣಿಗಾನಂದವನಿತ್ತರೂ, ಹಲವು ಸಲ
ಹಣ್ಣೆಲೆಗಳುದುರಿ ಬನ ಹಸುರಾದರೂ ತಿರುಗಿ
ನಿದ್ರಿಸುವೆ ನಿನ್ನ ಬಳಿಗೆ

ಜಲ್ಪನೆಯ ಬೇಸರಿಕೆ ಬಂತೆನಗೆ, ಸೊಗಯಿಸುವ
ಕಲ್ಪನೆಯು ಕೂಡ ಬಳಲಿತು, ಶ್ರಾಂತನಾದೆ ನಾ,
ಕಲ್ಪಾಂತಕಾಲ ಬಂದರು ನಿನ್ನ ನಂಬುವೆನು,
ನನ್ನ ವಟಪತ್ರವಾಗು

# ರವದಿ

ಸೂಚನೆ:— ನನ್ನ ಮನಸನು ನಾನು ಕುಳಿತು ರಂಜಿಸುತಿರಲು
ತನ್ನ ಮನವಿಯನಿಡಲು ಬಂದ ಬಡವನ ಹಾಗೆ
‘ ಮನ್ನಣೆಯು ’ ಎಂದೆನುತ ಪಡುವಲದ ಗಾಳಿಯೊಡ
ಬಂದಿತೆನ್ಮುಂದೆಯೇನೋ !

ಕಸದಂತೆ ಬಿದ್ದಂಥ ರವದಿ ಕಂಡೆನು ನಾನು
ಕಸವೆಂದು ಒಗೆದಂಥ ರವದಿ ಕಸವಾಗಿತ್ತು
ಕಸವಲ್ಲವೆಂದು ನಾನೆತ್ತಿದೆನು; ಅಂತೆಯೇ
ಕಸವಾಗಲಿಲ್ಲ ರವದಿ

“ ಕಸಕಡ್ಡಿಗಳ ಕೂಡ ಬಿದ್ದಂಥ ರವದಿಯೇ !
ಹೊಸಹಾಡುಗಳು ನಿನ್ನವೆಲ್ಲಿ ಹೋಗಿಹವೀಗ ?
ಹೊಸಹಾಡುಗಳ ಹಾಡು, ಹೊಸನಾಡುಗಳ ನೋಡು-
ದಕೆ ಮನಸು ಓಡುದೀಗ

ಭವದ ಬಂಧಗಳನ್ನು ತಿಳಿಯದೇ ಸಡಲಿಸುವ
ರವದೆ ! ನಿನ್ನಯ ರವವ ಕೇಳಿ ಕುಣಿದೆನು ದಣಿಯೆ;
ನವನವಾನಂದವನ್ನೀಯ್ದು ನಿನಗಾಗ್ಗ ಮಾ-
ಧವನ ಕೊಳಲೊಂದೆ ಸಮವು ”

ರವದಿಯನ್ನೆತ್ತಿ ತುಟಿಹಚ್ಚುತೂದಿದೆನು ನಾ;
ರವವು ಹೊರಡದು ಒಮ್ಮೆ ಹೊರಟಂತೆ ಈಗೇಕೊ ?
ಹವಣಿಸುವೆನಿಷ್ಟೊತ್ತು, ಹೊರಚಲ್ಲಬಾರದೇ
ಒಮ್ಮೆ ಹೊರಟಂತೆ ಸ್ವರವು !

ಬಕ್ಕನೇ ಬತ್ತಲೇ ಹಗಲಿರುಳು ತಿರುಗಿದೆನು
ದಿಕ್ಕುದಿಕ್ಕಿಗೆ ಚಿಕ್ಕ ಗೆಳೆಯಂದಿರೊಂದಿಗೇ
ಚಿಕ್ಕಂದಿನೊಳು ನಾನು ನಿನ್ನನ್ನು ಊದುತ್ತ
ಬಾಯಿಂದ 'ಊ, ಊ' ಎಂದು

ಹಕ್ಕಿಹಾಡದಗಾಲ, ಚಳಿಗಾಲವಿದ್ದರೂ
ಲೆಕ್ಕಿಸದೆ ಹಾಡುವೆವು ಹಗಲಿಲ್ಲ ಇರುಳಿಲ್ಲ;
ಹಕ್ಕಿ ಇಂಥವು ನೋಡಿ ನಕ್ಕವಾಗೂ ಕೂಡ
ದಿಕ್ಕು ಚಕ್ಕಂದದಿಂದ.

ನಡಿಗೆಯೊಳಗಿನ ಡೊಲು ಕಂಡು ನಾಚಿತು ನವಿಲು;
ನಡದೊಳಗಿನುಡದಾರದಿಂದೆದ್ದ ಗಿಲಗಿಲವು
ಕಡಗ ಗೆಜ್ಜೆಗಳೆರಡು ಅಡಿಗಡಿಗೆ ಅಲೆದಾಡಿ
ರುಮುಝುಮೆಂದೆದ್ದ ಸರವು

ನುಡಿಗೆ ಬಂದದ್ದಂದು ನಗುವ ಹುಡುಗರ ಕಂಡು
ನಡು ಊರಿನೊಳು ಕೂಡ, ಜನರಿಗನಿಸಿತೊ ಆಗ-
ಬಡಗ ಹುಡುಗರು ಏನು ಕೊಳಲೂದುತಿರುವರೋ
ನೀಲಗಿರಿ ದರಿಗಳೊಳಗೆ !

ಹರಿವ ಮನಸಿಗೆ ಕಾಣುವಂಥ ಗೊಂಬೆಗಳನ್ನು
ಪಿರಿಪಿರೀ ಹಿಗ್ಗುತದರಂತೆ ಪಾಟಿಯಮೇಲೆ
ಬರೆದು ಹೋಗಲು ಕೀಚಿ ಚೀರಿದಂತಾಗೆ,
ಬಾಲಕರ ಮೈನಡುಗುವಂತೆ

ಮರೆತು ನಿನ್ನನ್ನೂದ ಹೋಗಲೊಡ ಹಾಗಾಗಿ
ಝುರಿಗೆ ನೀರಡಿಸಿ ಬಂದಡನು ಬರಿ ಕಂಡಂತೆ
ಭರದಿ ಬೆಳೆಯುವ ಗಿಡಕೆ ಸಿಡಿಲು ಬಡಿದಂತೆ ಆಹ!
ಮನವು ದಶಖಂಡವಾಯ್ತು

ಇನ್ನೂ ವಿರಾಜಿಪಿರುಳಿನ ಹೆರಳುಭಂಗಾರ
ಇನ್ನುಮೇಲ್ ನೆರೆಸುರಿವ ಶೀತಲ ಮರೀಚಿಗಳ
ಜೊನ್ನು ಸಹ ನನ್ನ ಸೊಗಸಿನ ಹೂವು ಬಾಡುತಿರೆ
ವಿರಸವೆಂದೆನಿಸದಿರದೇ ?

ಭಿನ್ನನಾದೆನು, ನನಗೆ ತೋಚದಾಯಿತು ಹಾದಿ;
'ಛಿನ್ನ ಮನವನು ತಿರುಗಿ ಹೇಗೆ ಬೆಸೆಯಲಿ?' ಎಂದು
ನನ್ನ ಮನಸಿಗೆ ನಾನು ಕೇಳುವಸಿತರೊಳೆನಗೆ
ರವದಿಯುತ್ತರವು ಬಂತು:

ಮಧುಮಾಸದೇರ್ಗೆಂಪು ಪೋಪುದಷ್ಟೇ ಅಲ್ಲ
ಮಧುರ ಕಂಠವು ಅದರ ಕೂಡ ಬತ್ತುವದಿತ್ತ
ವಿಧುರನಂತೀ ಜಗವು ಬಳಲುವದು ಸುಖವಿಂಗು-
ತಾಗ ಅರಜೀವವಾಗಿ.

ವಿಧಿಚಕ್ರ ದಿನರಾತ್ರಿ ತಿರುತಿರುಗಿ ಸುಗ್ಗಿ ಬರೆ
ಬಧಿರ ಜಗದಂತೆನಗೆ ಹರ್ಷವಿಮ್ಮಡಿಯಾಯ್ತು
ಮಧುರತರಸ್ವರ ಕೇಳಿ ಸಾಂದ್ರ ಆನಂದದಿಂದಲಿ
ಹರಿದಂಥ ಕೂಗುಗಳನು

ಆಗ ಉನ್ಮನನಾಗಿ ರವದೆಯನ್ನೂದುತ್ತ
ಆಗ ಮರಿಮರುತನೊಲು ಸುಖದ ಗೀತಗಳನ್ನು
ಜಾಗುಮಾಡದೆ, ಜಗವ ತೂಗಿಸುತ ಹಗಲಿರುಳು
ಹೊರಟೆ ನಾ ಮುಗಿಲಿನೊಳಗೆ

ಆಗ ಆನಂದ ಪರಮಾವಧಿಯನೇರಿತ್ತೈ !
ಯೋಗ ಹೊಂದಿತು ಮನಸು ತನ್ನ ಕನಸುಗಳಲ್ಲಿ;
ಭೋಗಿಸಿದೆನೋ ನಿದ್ರೆಯಲ್ಲಿ ಮರೆತಿದ್ದ ಜ-
ನ್ಮಾಂತರದ ಸುಖಗಳನ್ನು !

# ಜೇನುಹುಟ್ಟು

ಕಾಡಿನೊಳು ಗಿಡಬಳ್ಳಿಗಳನು ಸುತ್ತಾಡಿ ನಾ
ನಾಡಿನೊಳಗಿನ ತೋಟಗಳನು ನೆರನೋಡೀಗ
ಬಾಡಿ ಬಳಲುತ ಜೇನು ಹನಿ ತೊಟಕು ದೊರಕದೇ
ತಿರುಗಾಡಿ ತಿರುಗಿ ಬಂದೆ

ಬೆಂದು ಬಿಸಿಲಿಗೆ ನೊಸಲ ಬೆವರನೊರೆಸುತ ಒಂದು
ಒಂದು ಬೇವಿನ ಬುಡಕೆ ಸಿಂದು ಅಳವಳದಿಂದ
“ಎಂದಿಗೂ ಸಿಗಲಾರೆಯಾ, ಜೇನಿನಸರಸಿಯೇ!”
ಮನದೆ ಕಡುನೊಂದು ಎಂದೆ

ಎನ್ನುತೀಪರಿ ಕಾಲ ಚಾಚಿ ಬೇಸರದಿಂದ
ಬೆನ್ನ ಭೂಮಿಗೆ ಹಚ್ಚಿ ಮಲಗುವನಿತರೊಳೆನ್ನ
ಕಣ್ಣೆದಿರು ಗಿಡದೊಳಗೆ ಗುಟ್ಟೆಸಂತಡಗಿರುವ
ಜೇನ ಹಿರಿಹುಟ್ಟು ಕಂಡೆ!

ಅಬ್ಬರದ ಬೇಸಿಗೆಯು ಬೇಟಗಾರತಿ ರತಿಯು
ಹುಬ್ಬೆ! ಹರೆಯದ ಬಯಕೆಗಳು ಕೊಬ್ಬಿ ಹೊರಡಿಸಿದ
ನಿಬ್ಬಣವೆ! ಕಬ್ಬಿಣವ ಮಣಿಸಲಳವುಳ್ಳ ಕಾ-
ಮನ ಕೈಯ ಬಿಲ್ಲುಗಬ್ಬೇ!

ಹಬ್ಬವೇ! ಕರಳು ಮರುಳಾಗಿ ಹಾಡುವ ಹಾಡು-
ಗಬ್ಬವೇ! ಉಬ್ಬಿದೆದೆಯಿಂದ ಕೆಲೆದೆಂದೆ ನಾ-
ನೊಬ್ಬನೇ ನಿನ್ನನ್ನು ಬೆಟ್ಟಿಯಾಗುವೆನೆಂದು
ನಿಟ್ಟಿರುಳಿನಲ್ಲಿ ಬಂದು

ಕಾರಿರುಳ ಕತ್ತಲೆಯ ಗವಿಗೆ ಗೊತ್ತಾದಂತೆ
ಹಾರುಗಾಲಿನ ಭರದಿ ಗಿಡದಡಿಗೆ ತಲುಪಿದೆನು
ದಾರಿಕಾರರ ಹಾಗೆ, ನೀರಡಿಸಿ, ಬೇಸಿಗೆಯ
ನಡುಹಗಲಿನಲ್ಲಿ ನಡೆದು

ಮೂರು ಬೊಟ್ಟಿನ ಮೇಲೆ ಕಂಡೆ ಕಟ್ಟಿದ ಮುಗಿಲು
ಹಾರಿದೆನು ಜೇಂಗೊಡಕೆ, ಹೀರಿದೆನು ಬಾಯ್ಹಚ್ಚಿ
ತೀರಿದರು ತಣಿವಿಲ್ಲ ಮೈಮರೆಯೆ ಕುಡಿದರೂ
ಮನದಣಿಯಲಿಲ್ಲ ಕಡೆಗೂ

# ಆನಂದವೇ !

ಗೆಳೆಯರ ಸಮೂಹದೊಳು ನಗುತ ಕೆಲೆಯುತ ಕಾಲ
ಕಳೆದೆನು; ವಿಹಂಗಗಳ ಗಗನದೊಳಗಿನ ಗಮನ,
ಮಳೆಗಳಾಡುವ ಪಗಡಿ-ಪಕ್ಕಂಗಳನ್ನು ಹೂ-
ಚಿಗುರೆಲೆಯ ಲೀಲೆಯನ್ನು

ಹಳಿಯದಿನಿಸುಳಿಸದಲೆ ಸಕಲವನು ಭೋಗಿಸುತ
ಬೆಳೆದೆ, ಹನಿ ಬಿಡದೆ ನಿನ್ನನು ಸವಿದೆನಾನಂದ !
ಗಿಳಿಯು ಕುಡುಚೊಗಚೆಯೊಳು ಅಡಗಿದಂತಹ ರಸವ
ನೋಡಿ ಗಡ ಹೀರುವಂತೆ

ಅಕ್ಕೆಕ್ಕಿಗಳ ಚಿಕ್ಕ ಚಿಕ್ಕೆಗಳ ಸುರಿದ ಬೆ-
ನ್ನಕ್ಕರದೊಳೇರಿ, ಭೋರಂಗಿಗಳ ಭುಂಕಾರ-
ವಕ್ಕಣಿಸಿ ಸಂಕೇತದಂತೆ, ದುಂಬಿಯು ಹಲವು
ಬಣ್ಣದಾ ಪಕ್ಕಗಳನು

ಸಿಕ್ಕಿಸಿಕ್ಕಿತಿದೀಗಯೆನುತ ಹೊಲಗದ್ದೆಗಳ
ಹೊಕ್ಕು, ಸಿಗದಿದ್ದರೂ ನಕ್ಕೆನಾಸಂದವೇ !
ನಕ್ಕು ನಗಿಸುತಲೆಸಗೆ ಮನೆಯಿಂದಲೆಳೆದೊಯ್ದು
ಬಿಸಿಲುಮಳೆಚಳಿಗಳಲ್ಲಿ

ಹಾಲುಗಲ್ಲದ ಬಾಲನೊಲು ಕಂದ! ಆನಂದ!
ಕಾಲುಗಳನಿಡುತ ಬಾ ದಟ್ಟಡಿಯ ಚಂದದಲಿ
ಬಾಲಕರನಂತ ಲೀಲೆಗಳನ್ನು ತೋರುತ್ತ
ಮುತ್ತೆ! ಬಾ! ಮುದ್ದೆ ಬಾರೈ!

ಸಾಲಲಾರದೆ ಕಂಠ, ಗದ್ಗದದ ವಚನಗಳು
ಮೇಲು ಮೇರೆಯ ಮೀರಿ ಬಾಯ್ದೆರೆದು ತೇಲುವವು
ನಾಲಿಗೆಗು ನಿಲುಕಲಾರದ ನುಡಿಗಳನ್ನು ನಾ
ನುಡಿಯುವದದಾವ ತೆರದಿ?

ಬಾ ನನ್ನ ಹೃದಯಮಂದಿರದ ಬಾಗಿಲ ತೆರೆದೆ
ಯಾ ನಿನ್ನ ರೂಪಕ್ಕೆ ಜಗವು ಮರುಳಾಯಿತೋ
ಆ ನಿನ್ನ ರೂಪವನೆ ಧರಿಸಿ ಬಾ, ಜೀವಿತದ
ಸಾರ್ವಭೌಮನೆ ಮೆಲ್ಲನೆ.

ಈ ನನ್ನಯಂತರಂಗದ ಸಭಾಮಂಟಪವ
ನಾನೆನ್ನ ಕೆನ್ನೀರಿನಿಂದ ತಳಿಹೊಡೆದೆನೈ
ಬಾ, ಸನ್ನಿಯೇ ನಿನ್ನ ಗದ್ದಿಗೆಯೋಲಾಗುವದು
ಏರದನು ಪಟ್ಟದರಸೇ!

ನಗೆಯು ನಗರಾಜನಲಿ ಹರಿವ ಗಂಗಾನದಿಯು
ಮಿಗಿಲಾದ ಹರಿಹದೊಲು ಹರಿಯೆ ಸೂಸಲು ತಡೆಯು;
ಸೊಗಸೆ! ನಿನ್ನನ್ನಾಗ್ಗೆ ಬೊಗಸೆಯಿಂದಲಿ ಕುಡಿದೆ-
ಕುಡಿದು ನೊರೆಯುಳ್ಳ ನೀರು

ಚಿಗಿತವಾಕಾಂಕ್ಷೆಗಳು ಚಿಕ್ಕಂದಿನಲಿ, ನಿನ್ನ
ಹಗಲಿನೊಳು ಕಲ್ಪವೃಕ್ಷಗಳಂತೆ ಬೆಳೆಯುತ್ತ
ಮುಗಿಲನ್ನು ಭೇದಿಸುತ್ತೇರಲಿಚ್ಛಿಸುತಿಹವು
ಹಾರು ಮೇಲಕ್ಕೆ ಮುಗಿಲೇ!

# ಶಾಂತಕವಿಗಳ ವಿಶ್ರಾಂತಿ

ನಟ ತೆರೆಯ ಮರೆಯಾದ ಆಟ ತೀರಿಸಿಕೊಂಡು,
ಭಟ ಸಮರದಿಂದ ತೆರಳಿದ ಅರಸನರಮನೆಗೆ;
ಪಟು ಪಾಡುಗಾರ ತುಟಿ ಮುಚ್ಚಿದನು ನಾಡು-
ನುಡಿಗಳ ಹಾಡುಗಳನು ಹಾಡಿ.

ಆಟಮಟದ ಮಾತಲ್ಲ; ನಾಡೆ ನಾರಾಯಣನು,
ದಿಟವಾಗಿ 'ನುಡಿಯೆ ಸಿರಿ' ಎಂದು ಕೀರ್ತನೆಗೈದು
ಘಟದಿ ಕೀರ್ತನಗಾರ ಬೆವರನೊರಿಸಲು ಹಿಂದೆ
ಸರಿದ ವಿಶ್ರಾಂತಿಗಾಗಿ.

* * * * *

ಮುಪ್ಪಾಗಿ ಜರಿಯಾದ ಬಟ್ಟೆಯನು ಬೀಸಾಡಿ
ದಪ್ಪನ್ನ ಹೊಸದೊಡಿಗೆಯನು ಬೇಡಲಂಬರಕೆ
ಸಪ್ಪಗಿನ ನುಡಿಗಾಗಿ ಉಪ್ಪು ತರಹೋಗಿಹರು
ರಸವಂತಿಯಿರುವ ಕಡೆಗೆ.

ಸಿಪ್ಪಿಯನೆ ಒಹುದಿವಸ ಚೀಪಿ ಬೇಸರಬಟ್ಟು
ಅಪ್ಪನಲಿ ಹೊಸಹಣ್ಣು ಪಡೆಯಹೋಗಿಹರಿಂತು
ತಪ್ಪದೇ ತಿರಗುತಿಹರೆಂದು ತಿಳಿಯಲಿ ಜನರು
ಬೆಳವೊಲದ ನಾಡಿಗಾಗಿ.

# ತಿರುಕ

ನಾಡಾಡಿ ಕತ್ತೆಗೆ
   ಹಾಳುಗೋಡೆಯ ನೆರಳು
ಬೀಡಾಡಿ ನಾಯಿಗೆ
   ಬೀದಿಗಾವಲಿ ನೀರು
ಕಾಡುವ ಕಾಗಿಗೆ
   ತಿಪ್ಪೆಯೆಂಜಲು ಕೂಳು
ಹಾದಿಯ ಹಕ್ಕಿಗೆ
   ಬರಡುಮರದಲಿ ಜೊಂಪು
ತಿರುಕಾ—ಏ ತಿರುಕಾ!
   ಮನುಜನಾದರೆ ಏನು
ಮರುಕವಿಲ್ಲದ ಜಗವೆ ನರಕಾ!
      ಕಾಣೊ ನರಕಾ!

ಗತಿಗೆಟ್ಟ ವಿಧವೆಗೆ
   ನೀರಿನ ತಳ ತವರು
ಪರದೇಶಿ ಕೂಸಿಗೆ
   ಅತ್ತರೆ ಔಷಧವು
ಪಾಪಿಗಜ್ಞಾನಿಗೆ
   ಕೊರಳ ಗಂಟೇ ನಂಟು
ನೋವ ನುಂಗಿದವಗೆ
   ಹಸಿವುಂಟು ವಿಷವುಂಟು
ತಿರುಕಾ— ಏ ತಿರುಕಾ!
   ಕರುಳು ಇದ್ದರೇನು
ಕಣ್ಣು ಇಲ್ಲದ ಜಗವೆ ನರಕಾ!
      ಕಾಣೊ ನರಕಾ!

# ಪರಾಗ

ಬಾ ಭೃಂಗವೆ ಬಾ, ವಿರಾಗಿಯಂದದಿ
ಭ್ರಮಿಸುವಿ ನೀನೇಕೇ?
ಕಂಪಿನ ಕರೆಯಿದು ಸರಾಗವಾಗಿರೆ
ಬೇರೆಯ ಕರೆ ಬೇಕೇ?

ಒರಲಿಹ ಕಾಯಿಯ ಪಾಡಿನ ರುಚಿಯೂ
ಇದರೊಳು ಮಡಗಿಹುದು.
ನಾಳಿನ ಹಣ್ಣಿನ ರಸವಿಲ್ಲಿಯು ಮಕ-
ರಂದದೊಳಡಗಿಹುದು.

ಕವನ ಕೋಶದೀ ಕಮಲ ಗರ್ಭದಲಿ
ಪರಾಗವೊರಗಿಹುದು.
ನಿನ್ನ ಮುಖಸ್ಪರ್ಶವೂ ಸಾಕು; ಹೊಸ
ಸೃಷ್ಟಿಯೆ ಬರಬಹುದು ॥ ಬಾ, ಭೃಂಗವೆ, ಬಾ

## ವಸಂತಮುಖ

ಉದಿತ ದಿನ! ಮುದಿತ ವನ
ವಿಧವಿಧ ವಿಹಗಸ್ವನ
ಇದುವೆ ಜೀವ, ಇದು ಜೀವನ
ಪವನದಂತೆ ಪಾವನ

ಏನೊ ವಿಧ! ಏನೊ ಹದ
ಗಾಳಿಗೊಡೆದ ಬುದ್ಬುದ
ಬೆಳಕೆ ಬದುಕು ಎಂಬ ಮುದ
ಜೀವಹೊಮ್ಮ ಚಿಮ್ಮದ

ನೂರು ಮರ! ನೂರು ಸ್ವರ
ಒಂದೊಂದು ಅತಿ ಮಧುರ
ಬಾಧವಿರದೆ ಬಂಧುರ
ಸ್ವಚ್ಛಂದ–ಸುಂದರ

# ಶ್ರಾವಣದ ವೈಭವ

ಏನು ಹಸಿರು! ಏನು ಹಳದಿ!
ಸುತ್ತುಮುತ್ತು ನೋಡು ಕೆಳದಿ! ॥ ಪಲ್ಲ ॥

ಹುಲ್ಲು ಹೂವು ಆದರೇನು,
ಹಬ್ಬದುಬ್ಬಿನಲ್ಲಿವೆ;
ದಿಬ್ಬಗಳನು ತಬ್ಬಲೆಂದು
ಎಲ್ಲ ನೆಲಕು ಹಬ್ಬಿವೆ.

ಮಳೆಯ ಬಿಲ್ಲು ಮುರಿದು ಹತ್ತು-
ಕಡೆಗೆ ಹಂಚಿದಂತಿದೆ,
ಹುಲ್ಲು ಕಸವು ಬಣ್ಣ ಬಡೆದು
ಹೂತು ಹಿಗ್ಗಿ ನಿಂತಿದೆ.

ನೆಲದ ಬಸಿರ ರತ್ನರತ್ನ
ತನ್ನ ಸೊಬಗ ಕಳಿಸಿದೆ;
ಬಣ್ಣದೊಂದು ಜಾತ್ರೆಗಾಗಿ
ತನ್ನ ಪಯಣ ಬೆಳೆಸಿದೆ.

ಮಣ್ಣುಹುಡಿಯು ಕಣಕಣವೂ
ಕಣ್ಣು ಪಡೆದ ಹಾಗಿದೆ;
ಬಾನಿನಂಚಿನಲ್ಲಿ ಮೋಡ
ನೋಡಲಿದನೆ ಬಾಗಿದೆ.

ಮುಗಿಲು ನೆಲಕೆ ಮುಕ್ಕು ಚಿಕ್ಕೆ
ಕಾಳುಗಳನು ಬಿತ್ತಿದೆ;
ನೆಲವು ಮುಗಿಲಗರ್ತಿಯಿಂದ
ಆರತಿಯನ್ನೆತ್ತಿದೆ.

ಬಸಿರೆ ಹೊಲಕೆ ಹೂವು ಮುಡಿಸ-
ಲೆಂದು ಬಂದ ಸಂಭ್ರಮು;
ಸೃಷ್ಟಿಯಲ್ಲೆ ಕಾಣುತಿಹುದು
ಮನುಜನೆತ್ತಿದೀ ಕ್ರಮು.

❖ ❖ ❖ ❖

ರಂಗು ಇಹುದು, ರೂಪವಿಹುದು,
ಗಂಧ ಒಳ್ಳಿತಿಲ್ಲವು;
ನಯವು, ನುಣುಪು, ಇದ್ದು ಏನು?
ವ್ಯರ್ಥವಾಯಿತೆಲ್ಲವು!

ಚದುರು ಹೂ ಲವಂಗ ಮತ್ತೆ
ಇದಕೆ ಹೆಸರು ಹೇಸಿಗೆ;
ಹೆಸರು ಪಡೆದ ಹೂವೆ ನಿನಗೆ
ಇಲ್ಲ ಮಳೆಯು ಬೇಸಿಗೆ.

ರಂಗವಲ್ಲಿ ಹಸೆಯ ಹಾಗೆ
ಏನು ರಂಗು ರಂಗಿದೆ!
ಗುತ್ತನಾಗಿ ಒತ್ತಿ ಬೆಳೆದು
ತಂಗಿದಲ್ಲಿ ತಂಗಿದೆ!

ಡೊಂಕು ಇಲ್ಲ, ಬಿಂಕವಿಲ್ಲ,
ಮುರಕ ಮಾಟವಿಲ್ಲದೆ,
ಹೊಲದ ಹೂವು ನೆಲದ ಹಾಗೆ
ನಿಂತ ಕಡೆಗೆ ನಿಲ್ಲದೆ?

ಗಾಳಿ ಬೀಸಿ ಹಾಸಿ ಹೋಗಿ
ಗಾಸಿ ಮಾಡಬಂದರು
ವಾಸಿಯಾಯಿತೆಂಬುವಂತೆ
ಇಹುದು ನೋಡು ನೊಂದರು.

❖ ❖ ❖ ❖

ಹುಡಿಯು ಅರಳಿ ಹೂವು ಆಗೆ,
ಹುಳಕೆ ರೆಕ್ಕೆ ಒಡೆದವು;
ಮುಸುಕು ಹರಿದು ಪಕ್ಕ ತೆರೆದು
ಚಿಟ್ಟೆ ಮುಕ್ತಿ ಪಡೆದವು.

ಮುಕ್ತಿ ಪಡೆದ ಹರ್ಷವೆನಲೊ!
ಸೆರೆಯ ಬಿಟ್ಟ ಹುಚ್ಚಿದು.
ಏನು ಆದರೇನು ಇಹುದು
ಅಚ್ಚ ಅಚ್ಚುಮೆಚ್ಚಿದು.

ಪಾತ್ರದವಳು ಸೂರು ನಾಟ್ಯ
ಆಡುವಂತೆ ಆಡುವ–
ಹುಡುಗನಂತೆ ಹುಡುಗಿಯಂತೆ
ಸಿಕ್ಕಕಡೆಗೆ ಓಡುವ–

ನಯವೆ ರೆಕ್ಕೆಪಡೆದು ಚೆಲ್ಲ-
ವರಿದು ಪಾರುತಿರುವದು;
ಹುಚ್ಚುಹಿಗ್ಗಿಗೆಗ್ಗು ಇಲ್ಲ
ಎಂದು ಸಾರುತಿರುವದು.

ರೆಕ್ಕೆ ಹುಳುಗಳಲ್ಲ ಇವೂ
ಚಿಕ್ಕ ರೂಪ ತಾಳಿದ
ಚೊಕ್ಕ ಅಪ್ಸರಸಿಯರೇ
ನಕ್ಕು ನಲಿಯುತಿರುವರು.

‘ ಇಂದ್ರಜಾಲದಿಂದ ಬಂದ
ಸುಂದರಿಯರು ’ ಎಂಬುದು
ಊಹೆ ಕೂಡ ಊಹಿಸಿಯೂ
ತನ್ನ ತಾನೆ ನಂಬದು;

ಒಂದನೊಂದು ಅಟ್ಟುತಿಹವು
ಒಂದನೊಂದು ಮುಟ್ಟಲು,
ಅಲ್ಲು ಇಲ್ಲು ಎಲ್ಲು ಚಿಟ್ಟೆ
ಸಾಲು ಸಾಲು ಮೆಟ್ಟಿಲು.

ಪ್ರಣಯಭಂಗ ಪಂಕ್ತಿ ಪಂಕ್ತಿ
ಸ್ವರ್ಗಸೋಪಾನವು !
ಎದೆಯಲಿದ್ದ ತನನ ತಾನ
ಮೌನವೆತ್ತ ಗಾನವು !

ಹೂವು ಪಕಳೆ ಪ್ರಾಣ ತುಂಬಿ
ಚಿಟ್ಟೆಯಾಗಿ ಕಾಂಬವೊ !
ಕುಣಿದು ದಣಿದ ಚಿಟ್ಟೆ-ಪಕ್ಕ
ಹೂವು ಎನಿಸಿಕೊಂಬವೋ !

ಒಂದನೊಂದು ತಬ್ಬಿ ಮುತ್ತಿ
ಏಕಜೀವವಾಗಿವೆ.
ಜಡವು ಜೀವವೆಂದು ಸುಳ್ಳೆ
ಎರಡು ರೂಪವಾಗಿವೆ.

ಎಂಟು ಹತ್ತು ಗುಂಪುಗುಂಪು
ಒಂದನೊಂದು ಬಳಸುತ
ಒಂದನೊಂದು ಎಳೆದು ಎಳಸಿ
ಹಿಂದೆಮುಂದೆ ಕಳಿಸುತ

ಚಿಟ್ಟೆದುಂಬಿ ಒಟ್ಟಿಲಾಗಿ
ದೊಂಬಿಯಾಡುತಿರುವವು;
ಗೊಂಬಿ ಬರೆದ ಹಾಗೆ ಹೂವು
ಅದನು ನೋಡುತಿರುವವು.

❖ ❖ ❖ ❖

ಹಾಳು ಬೀಳು ಪಡವು ಬಂಜೆ
ಹಕ್ಕಲೊಕ್ಕಲೆಲ್ಲವೂ
ವ್ಯಾಪ್ತವಾಯ್ತು ಹೂವ ಹೂವ
ರಾಸಲೀಲೆಗೆಲ್ಲವೂ.

ಹೂವ ಹಡಲಿಗೆಯನು ಹೊತ್ತ
ಭೂಮಿತಾಯಿ ಜೋಗಿತಿ,
ಮೈಕತುಂಬಿ ಕುಣಿಯುತಿಹಳ-
ನಂತಕಾಲವೀಗತಿ.

ಎಷ್ಟು ಹೋಲಿಕೆಯನು ಕೊಟ್ಟು
ಹೊಗಳಿ ಮನವು ತಣಿಯದು;
ರೂಪಗಳಿಗೆ ಚಿತ್ರಗಳಿಗೆ
ಉಪಮೆಗಳಿಗೆ ಗಣಿಯಿದು.

## ಹೂತಽದ ಹುಣಸಿ

ಹೂತಽದ ಹುಣಸಿಯಾ ಚಿಗುರು
ಮದರಂಗಿ ಬಣ್ಣದುಗುರು
ರುಚಿಗೆ ಹುಳಿಯೊಗರು
ನೋಡ್ಯೆ ಜೀವಕ್ಕನಿಸಿತಽ ಹಗರು ॥ ಹೂತಽದ

ಉಗುರ್ಗೆಂಪು ಹಸಿರು ಜಿಳಿನಿಂಬಿ
ಹುಣಸಿಯಾ ರೆಂಬಿ
ಚಿಗತೀತೇನೊ ಎಂಬಿ
ಕಾಮುಽನ ಬಿಲ್ಲಿನ ಕೊಂಬಿ ॥ ಹೂತಽದ

ಬ್ಯಾಸಿಗಿ ಹೊಡೆದಽದ ಬಿಸಿಲಿನ ಡೇರೆ
ಮಧ್ಯಾಹ್ನದ ಪಾಹರೆ
ಯಾರಿಗಿಲ್ಲ ಹ್ವಾರೆ
ಸದ್ದು ಸುಳಿವು ಇಲ್ಲ ಬ್ಯಾರೆ ॥ ಹೂತಽದ

ಸುಳ್ಳ ಸುಳ್ಳ ಗಾಳಿ ಹಾಕಿತ ಸಿಳ್ಳು
ಕಾಗಿ ಚುಂಚಿನ ಹಳ್ಳು
ಬಿದ್ದು ಅಂತ್ಯು 'ಹೊಳ್ಳು'
ಮ್ಯೆ ಚಾಚ್ಯಽದ ಹುಣಸಿಯು ನೆಳ್ಳು । ಹೂತಽದ

ಅಡ್ಡಾಗತೇನಿ ನೆಳ್ಳಾಗ ಹೀಂಗ
ಹೂವು ಚಿಗುರು ಹ್ಯಾಂಗ
ಅವಽ ಹಾಸಿಧಾಂಗ
ಹುಳಿ ಚಿಗುರು ಸುರಿಸಿ ನಾ ದಂಗ ॥ ಹೂತಽದ

ಬಿಸಿಲ್ಗುದರಿ ಕುಣಿಯುಲಿ ದೂರ
ಯಾರಿಗೆ ಬೇಕು ಸೀರ
ಹೀಂಗ ನನ್ನಿದಿರ
ಕಣ್ಣಾಳತಿಯೊಳಗ ನಿ ಬಾರ ॥ ಹೂತಽದ

ಹಾರತಿರಲಿ ಗಾಳಿಗೆ ಬಿಚ್ಚಿದ್ದೆರಳು
ವಾರಿಯಿರಲಿ ಕೊರಳು
ಬಾಚತಿರಲಿ ಬೆರಳು
ನೋಡ್ತೇನಿ ನಿನ್ನ ಕವಿನೆರಳು ॥ ಹೂತಽದ

ಕಣಕಣ್ಣ ಚಕಮಕಿ ಇತ್ತ
ಕುಡಿಗಣ್ಣಿನತ್ತ
ತಾಕಿ ಹಾರಿತ್ತ
ಗಾಳಿ ಸವಾರಿಗ್ಹೊರಟಿತು ಚಿತ್ತ ॥ ಹೂತsದ

ಅಗೊ ಗಾಳಿ ಧೂಳಿಯಾ ಬಂಬಾ
ನಿಂತಾಂಗ ಅದ ಖಂಬಾ
ಅಲ್ಲಿ ರೌದಿ ತುಂಬಾ
ಗಣಿ ಕುಣಿಧಾಂಗ ಡೊಂಬರ ರಂಭಾ ॥ ಹೂತsದ

ಮ್ಯಾಲೆ ಅಲ್ಲಿ ಪಾರಿವಾಳ ಜೋಡಿ
ಒಂದಕ್ಕೊಂದ ನೋಡಿ
ಬಿಸಿಲ ತೆರೆ ದೂಡಿ
ಹಾರ್ತsದ ನೀಲಿಮುಗಿಲ್ಹೊಕ್ಕಡಿ ॥ ಹೂತsದ

ಕಂಡಂಗಾತು ನೀರಿನ ಕೊಳ
ನೀಲಿ ಮುಗಿಲ ಜಳಾ
ಎಂಥ ಝುಳ ಝುಳಾ
ಮುಳುಮುಳುಗಿ ಹೋತು ಮನದ ಧೂಳಾ॥ ಹೂತsದ

ಕಾಲ ಹೋಗತಿತ್ತ ಹಿಂದ ಸರಿದು
ಮನಸು ಆತ ಬರಿದು
ಮಧ್ಯಾನ್ ಬ್ಯಾಸರ ಮುರಿದು
ಬಿಸಿಲ ತಾನsಹೋಗತಿತ್ತ ಹರಿದು ॥ ಹೂತsದ

ಕವಿ ಜೀವದ ಬ್ಯಾಸರ ಹರಿಸಾಕ
ಹಾಡ ನುಡಿಸಾಕ
ಹೆಚ್ಚಿಗೇನು ಬೇಕ ?
ಒಂದು ಹೂತ ಹುಣಿಸಿಮರ ಸಾಕ ॥ ಹೂತsದ

## ಚಿತ್ರಿಯ ಮಳೆಯ ಸಂಜೆ

ಕುರುಡು ಪ್ರಿತಿಯ ಹಾಂಗ
ಕುರುಡು ಚಿತ್ರಿಯ ಮಳೆಯೆ
ಮುಗುಳು ನಗಿ ಸುತ್ತುರುಳಿಸಿ
ಸುರದಸತ್ತ ಸುರದಾವ.

ಎತ್ತೇನೋ ಬಿತ್ತೇನೊ
ಮಿಂಚಿನ ಮುತ್ತೇನೊ
ಕಣ್ಮುಚ್ಚಿ ತೆರವುದರಾಗ
ಹರದಾಽರಿಗೆ ಹರದಾವ.

ಇದಿರು ಗುಡ್ಡದ ತಲೆಗೆ
ಮೋಡ ಮುಸುಕೆಳೆವಾಗ
ಬದಿಯ ಗುಡ್ಡದ ಮ್ಯಾಲೆ
ಬಿಸಿಲು ಮೈ ಚಾಚ್ಯಾವ.

ತೋಪು ತೋಟದ ಗಾಳಿ
ಸುಗ್ಗಿ ಸುಸುಳಿ ಬಂದು
ಹುಲ್ಲುಗಾವಲಾ ಸವರಿ
ಬೈತಲಾ ಬಾಚ್ಯಾವ.

ಗಿಡಬಳ್ಳಿ ಎಲಿ ಎಲಿ
ತೊಯ್ದು ತೆಂಗಿನ ಗರಿ
ಬೆಳ್ಳಿಸುಳಿ ಬರೆದಾಂಗ
ಮಿತಿಮೀಽರಿ ಮಿಂಚ್ಯಾವ.

ಪಡುವಲಕ ಮುಗಿದ ಕಿರಣ
ಮೂಡಲಕ ಚಿಮ್ಮಿಕೊಂಡು
ಅರಿಷಿಣ ಕುಂಕುಮ ತಂದು
ಮರದ್ಹಣಿಗೆ ಹಂಚ್ಯಾವ.

ಸಂಜಿ ಸೂರ್ಯಾನ ಹೆಗಲ
ಜರದ ಸೆಲ್ಲೇದ ಸೋಗಿ
ನವಿಲಗೊರಳಿನ ಮುಗಿಲ
ಸೆರಗ್ಗೆ ಬೀಸ್ಯಾವ.

ಹೊಲದಂಚಿನ ಹಸಿರ ಬಯಲು
ಮುತ್ತಿನ ಸೇಸೆ ತಳಿದು
ದುಡಿದವರ ಪಾದಕ್ಕಂತ
ಹಡದಿ ಹಾಸ್ಯಾವ.

ದಿನಗೂಲಿಗೆ ದುಡಿದು ದಣಿದು
ತಣಿದು ಹೊರಟವರ ಮಾರಿ
ಎದಿಯೆತ್ತರ ಬೆಳೆಗೆ ಕಳಸ
ಇಟ್ಟಾಂಗ ಮೆರೆದಾವ.

ಹದಕ್ಕ ಹವಣಾಗಿ ಬಂದ
ಮಳೆಗೆ ನೆನೆನೆನೆದು ನೆನಿಸಿ
ಬರುವ ಸುಗ್ಗಿಯ ಚಿತ್ರ
ಅವರ ಚಿತ್ತ ಬರೆದಾವ.

ಗದ್ದ ಗಲ್ಲದ ಹಂಚಿ
ಕಣ್ಟೋಗಿ ಹಸಿರ ಹಣಿ
ಇಳಿದ ಬೆಪರಿನ ಸಡುವೆ
ತೊಳೆದು ಎದ್ದಾವ.

ಸಿಂಗಾರಿಲ್ಲದೀ ಸೊಬಗು
ಸೊಗಸಿ-ಜೀವಕೆ ಮುದ್ದು;
ಸೋತ ದಾರಿಗರ ಕಣ್ಣು
ಮನಸು ಕದ್ದಾವ.

ಚವರಿ ಜೋಳದ ತೆನೆಯು
ಎರಡು ಬದಿಗೆ ಸರಿದು
ಅವರ ಮುಖರೇದ ಮುಖಕೆ
ಚವರ ಹಿಡಿದಾವ.

ಹಗಲು ಮಲ್ಲಾಡಕೆ ಕಳೆದು
ಇರುಳು ವಸತಿಗಂತ
ಬೆಳ್ಳಕ್ಕಿ ತೋರಣಗಟ್ಟಿ
ಬೆಳವಲಕ್ಕೆ ನಡೆದಾವ.

ಬಯಲು-ಗುಡಿಸಲದ ಜೀವ
ಕಾಡು-ಗೂಡಿನ ಹಕ್ಕಿ
ತಮ್ಮ ಸರಿಜೋಡಿ ಮಾಡಿ
ಸೋಬಾನೆ ಹೇಳ್ಯಾವ.

ಮುಚ್ಚಂಜೆ ಮುಗಿದಾಗ
ಸೀಗಿಗೌರಿಯ ದಸಿಯು
ತೇಲಿ ಬರುವಂತೆ ನಾಡು
ಕಿವಿಯಾಗಿ ಕೇಳ್ಯಾವ.

## ರಾಧೆಯ ಪಾಡು

(ಸಖಿ) 'ಮುಂದೇನೆ? । ಸಖಿ । ಮುಂದೇನೆ? ॥ ಪ ॥'

(ರಾಧೆ) 'ರೂಪ ಗುಣಕೆ ಮೆಚ್ಚಿ
ಬಂದನೆಂದೆನು ಹುಚ್ಚಿ
ಅಂದೆನೇ । ಮನದಿ ? ಅಂದೆನೇ'

'ಸಖಿ ಮುಂದೇನೆ ? । ಸಖಿ....'

'ಕಾಣುವಂತಹನಲ್ಲ
ಕಾಣದಾದನು ಗೊಲ್ಲ
ಚೆಂದೇನೆ ? । ಇದು ಚೆಂದೇನೇ ?

'ಸಖಿ । ಮುಂದೇನೆ ? । ಸಖಿ....'

'ಇವನ ಪಂಥವ ತೊಟ್ಟು
ಬಳಗವೆಲ್ಲವ ಬಿಟ್ಟು
ಬಂದೆನೇ। ಅಲ್ಲಿ ಬಂದೆನೇ'

'ಸಖಿ। ಮುಂದೇನೆ? ಸಖಿ....'

'ಒರೆದೆಸಂಗಽಲಾಚಿ
ಕರೆದೆ ಜೀವವ ಚಾಚಿ
ನೊಂದೆನೇ। ಬಹಳ ನೊಂದೆನೇ'

'ಸಖಿ। ಮುಂದೇನೆ? ಸಖಿ....'

'ಬರನು, ಕೂತಿತು ಧನಿ
ಕಣ್ಣೆಲ್ಲ ಕಂಬನಿ
ತಂದೆನೇ। ಕರಗಿ ತಂದೆನೇ'

'ಸಖಿ। ಮುಂದೇನೆ? ಸಖಿ....'

'ಕರಣ ಕಳವಳಿಸೀವೆ
ಹರಣ ತಳಮಳಿಸೀವೆ
ಒಂದೇನೇ?। ಸ್ಥಿತಿ ಒಂದೇನೇ?'

'ಸಖಿ। ಮುಂದೇನೆ? ಸಖಿ....'

'ಒಗೆದು ಹೂ ದಂಡಿಗೆ
ಯಮುನೆಯ ದಂಡಿಗೆ
ನಿಂದೆನೇ। ದುಃಖಿ ನಿಂದೆನೇ'

'ಸಖಿ। ಮುಂದೇನೆ? ಸಖಿ....'

'ಹೊಳೆಯೊಳು ಹೊತ್ತಾರೆ
ಧುಮುಕಿ ನಾ ಸತ್ತಾರೆ
ಹೊಂದೇನೇ?। ಅವನ ಹೊಂದೆನೇ?'

'ಸಖಿ। ಮುಂದೇನೆ? ಸಖಿ....'

'ನಲ್ಲ ತೋರಿಸಿ ಕೊಡು
ಬೇಕಾದ ವರ ಬೇಡು
ಅಂದೇನೇ? । ಸಖಿ ಅಂದೇನೇ'
'ಸಖಿ । ಮುಂದೇನೆ? ಸಖಿ....'

ಬಂತು ಚೆಲ್ವಿನ ತಿರುಳು
ಕೃಷ್ಣರಾಯನ ನೆರಳು
ನೋಡಿ ಅವಳ ಕರುಳು
ತೀಡಿ ಅವಳ ಕುರುಳು
ಪಿಡಿಯೆ ಅವಳ ಬೆರಳು
ಹೊಡೆಯೆ ಕಾಮನ ಸರಳು
'ಇಂದೇನೇ । ಎಂದಳು ಎಂದೇನೇ'

'ಸಖಿ । ಮುಂದೇನೆ? ಸಖಿ । ಹಿಂದೇನೆ?'

## ಮನೆಗೆ ಹೋಗವ್ವಾ !

ಬಂದೆವ್ವಾ ಕಾಮ ಹೊಟ್ಟೆಯೊಳಿಟ್ಟು
ನಿಂದೆವ್ವಾ ನೀರೆ, ನಾಚಿಕೆ ಬಿಟ್ಟು
ಮುಂದವ್ವ ನೀನು ಇಂದಿನ ತೊಟ್ಟು
    ನೀಗವ್ವಾ ! ಅದನ ನೀಗವ್ವಾ
    ಹೇ ! ಹೋಗವ್ವಾ ! ಮನೆಗೆ ಹೋಗವ್ವಾ !

ಕಣ್ಣವ್ವಾ! ಎಂಥ ಕ್ರೋಧಾ ತಳೆದೆ
ಮಣ್ಣವ್ವಾ! ಮಿಂಚು ಮೈಯಾ ಬೆಳೆದೆ
ಹೆಣ್ಣವ್ವಾ! ನೀನು ಹೆಣ್ಣೊಳು ಹೊಳೆದೆ
ಸಾಗವ್ವಾ। ಮುಂದೆ ಸಾಗವ್ವಾ
ಹೇ। ಹೋಗವ್ವಾ। ಮನೆಗೆ ಹೋಗವ್ವಾ!

ಬೇಡವ್ವಾ ಒಳಗೆ ಮತ್ಸರವೆಂಬೀ
ಸೋಡವ್ವಾ ಕಾಳವಿಷವು ತುಂಬೀ
ಕೋಡವ್ವಾ ಇಲ್ಲಿ ಒಡೆಯಿತು, ನಿಂಬೀ-
ನಾಗವ್ವಾ। ನೀನು ನಾಗವ್ವಾ
ಹೇ। ಹೋಗವ್ವಾ। ಮನೆಗ ಹೋಗವ್ವಾ!

ಬೇಕವ್ವಾ ದೈನ್ಯ ಬಿಂಕದ ತಾಯಿ
ಯಾಕವ್ವಾ ತೆರೆವಿ ತೊಂಡಿಲಬಾಯಿ
ಸಾಕವ್ವಾ ಮನವು ಮಾವಿನಕಾಯಿ
ಮಾಗವ್ವಾ। ಇನ್ನು ಮಾಗವ್ವಾ
ಹೇ। ಹೋಗವ್ವಾ। ಮನೆಗೆ ಹೋಗವ್ವಾ!

ಮೀರವ್ವಾ ಬೇಡ ಈಗಿನ ನಡಿಗೆ
ಕಾರವ್ವಾ ಡಂಭ ಕಾರುತ ಕಡೆಗೆ
ಸೇರವ್ವಾ ನೀನು ಪ್ರಭುವಿನ ಅಡಿಗೆ
ಬಾಗವ್ವಾ। ಅದಕ ಬಾಗವ್ವಾ
ಹೇ। ಹೋಗವ್ವಾ। ಮನೆಗೆ ಹೋಗವ್ವಾ!

ಆರವ್ವಾ ಕಡೆಯ ಮೋಹವ ಹಿಡಿದು
ಬೇರವ್ವಾ ಎಲ್ಲ ಕೂಡಲೆ ಕಡಿದು
ಆರವ್ವಾ ಪರಮಪದವ ನುಡಿದು
ಬೇಗವ್ವಾ। ಬಾರೆ ಆಗವ್ವಾ
ಹೇ। ಹೋಗವ್ವಾ। ಈಗ ಹೋಗವ್ವಾ!

# ನಲ್ಲನಲ್ಲೆಯರ ಲಲ್ಲೆ

ಸಲ್ಲೆ! ನಿನ್ನ ಲಲ್ಲೆವಾತು
ಮುಗುಳುನಗೆಯಲಲ್ಲೆ ಹೂತು
ಸೋತು, ಓತು, ಬಂತು, ಹೋ'ತು
ನಲ್ಲೆ, ನಿನ್ನ ಲಲ್ಲೆವಾತು.

ನಲ್ಲ! ನಿನ್ನ ಲಲ್ಲೆವಾತು
ಮೀಸೆಕುಡಿಯಲಲ್ಲೆ ಹೂತು
ಕುಣಿದು, ಮಣಿದು, ಬಂತು, ಹೋ'ತು
ನಲ್ಲ, ನಿನ್ನ ಲಲ್ಲೆವಾತು.

ನಲ್ಲೆ! ನಿನ್ನ ಲಲ್ಲೆವಾತು
ಕಣ್ಣಕಿರಣದಲ್ಲಿ ಸೂತು
ನೇತು, ಜೋತು, ಬಂತು, ಹೋ'ತು
ನಲ್ಲೆ, ನಿನ್ನ ಲಲ್ಲೆವಾತು.

ನಲ್ಲ! ನಿನ್ನ ಲಲ್ಲೆಮಾತು
ಹುಬ್ಬು-ಬಿಲ್ಲಿನಲ್ಲೆ ಆತು
ಸಿಡಿದು, ಮಿಡಿದು, ಬಂತು, ಹೋ'ತು
ನಲ್ಲ, ನಿನ್ನ ಲಲ್ಲೆಮಾತು

ನಲ್ಲೆ! ನಿನ್ನ ಮಾತಿನಲ್ಲೆ
ಹುಟ್ಟಿಬಂತು ಹುಟ್ಟು-ಲಲ್ಲೆ;
ಹೂಂಗುಟ್ಟಿ ಹುದುಗಬಲ್ಲೆ,
ಒಲ್ಲೆಯೆಂದು ಒಲಿಸಬಲ್ಲೆ.

ನಲ್ಲ! ನಿನ್ನ ಮಾತಿನಲ್ಲೆ
ಎದೆ ಮೃದಂಗದೊಂದೆ ಸೊಲ್ಲೆ
ಹುಚ್ಚು ಹಿಡಿಸಿ ನುಡಿಸಬಲ್ಲೆ;
ಹಿಡಿದ ಹುಚ್ಚು ಬಿಡಿಸಬಲ್ಲೆ.

ನಲ್ಲೆ! ನೀನು ಮಲೆಯ ಮೊಲ್ಲೆ
ನಿನ್ನ ಮೃದು ಸುಗಂಧ ಲಲ್ಲೆ;
ಅದರ ಸವಿಯು ಧ್ಯಾನದಲ್ಲೆ
ಏಕತಾನಮಾನವಲ್ಲೆ!

ನಲ್ಲ! ನಿನ್ನ ಉಸಿರಿನಲ್ಲೆ
ಗಾನದೊಂದು ಗಮಕವಿಲ್ಲೆ?
ಆ ಪ್ರಾಣವಿಲ್ಲದಲ್ಲೆ
ಗಾಳಿಮಾತು ಜೊಳ್ಳು ಲಲ್ಲೆ!

ಬಾನು ಬೆಳಕ ಹೂಡಿದಲ್ಲೆ
ಕಡಲಿನಲ್ಲಿ ಮೂಡಿದಲ್ಲೆ;
ನಲ್ಲ ನಲ್ಲೆ ಕೂಡಿದಲ್ಲೆ
ಹಿಗ್ಗಿಗುಂಟೆ ಮೇರೆ ಎಲ್ಲೆ?

## ಚಿರಂತನ

ಆ ಮುಖಾ—ಈ ಮುಖಾ
ಯಾವ ಗಂಡೊ
ಯಾವ ಹೆಣ್ಣೊ
ಪ್ರೀತಿಯೆಂಬ ಚುಂಬಕಾ
ಕೂಡಿಸಿತ್ತು
ಆಡಿಸಿತ್ತು
ಕೂಡಲದೊಲು ನೋಟವಾ
ಮೂರು ದಿನದ ಆಟವಾ

ಆ ಮುಖಾ—ಈ ಮುಖಾ
ಹೆತ್ತುದೊಂದು
ಹೊತ್ತುದೊಂದು
ಎಂಥ ಹಾಸ್ಯದೀ ಸುಖಾ
ಬೆರಕೆಯಿಂದೊ
ಎರಕದಿಂದೊ
ಬಂತು ಬೇರೆ ಜೀವನಾ
ಕೃಪೆಯೊ ಕಾಮದೇವನಾ

ಆ ಮುಖಾ—ಈ ಮುಖಾ
ಒಂದು ಸತ್ತು
ಒಂದು ಅತ್ತು
ಒಂದಕೊಂದು ಸಮ್ಮುಖಾ
ಬೇರೆ ಬತ್ತಿ
ದೀಪ ಹತ್ತಿ
ಬೆಳಗುತಿಹುದು ಸ್ನೇಹವಾ
ತುಂಬಿ ಬೇರೆ ದೇಹವಾ

ಆ ಮುಖಾ—ಈ ಮುಖಾ
ಇದ್ದು ಅಂತ
ಆಯ್ತುಸಂತ
ಒಗೆತಸದೀ ಒಮ್ಮುಖಾ
ಅಂಟಿಗಂಟು
ಚಿಗಿತು ನಂಟು
ಇದುವೆ ನಿತ್ಯನೂತನಾ
ಸಂತತಿಯೆ ಚಿರಂತನಾ

# ಪುಟ್ಟ ವಿಧವೆ

ಆಕೆಯಿದ್ದಳು ಕೂಸು; ಈತನಿನ್ನೂ ಹುಡುಗ.
ಅವರ ತಾಯ್ತಂದೆಗಳ ಹಿಗ್ಗು ಎಷ್ಟು!
ಧರ್ಮದಾ ಹೆಸರಿನಲಿ ಅವರ ಕೈಕೂಡಿಸಲು
ಇವರಿಗೆನಿಸಿತು ಹರ್ಷ ಹಬ್ಬದಷ್ಟು.

ಕೊರಳ ಕರಿಮಣಿ, ಗಲ್ಲದರಿಶಿಣವು ಮುಗಬೊಟ್ಟು
ಆ ಮೇಲೆ ಉದ್ದು ಕುಂಕುಮದ ಅಂದ!
ಆ ಪುಟ್ಟ ಮುತ್ತೈದೆ ಪುಟಪುಟನೆ ನೆಗದಾಡೆ
ಅಷ್ಟೆ ಕಂಡಿತು ಕಣ್ಣಿಗೆಷ್ಟೊ ಚಂದ.
ಆಕೆ ದೊಡ್ಡವಳಾಗಿ, ಈತ ಚಿಕ್ಕವನಿದ್ದು
ಶೋಭನವ ಮಾಡಿದ್ದು ಊರಿಗಾಟ!
ಪೆಚ್ಚುನೋರೆಯ ಅಳಿಯ-ದೇವರಿದಿರಲಿ ಜನಕೆ
ಕಡಿಮೆ ಸಿಹಿಯೆನಿಸಿತ್ತೆ ಪ್ರಸ್ತದೂಟ?

ವರ್ಷವೆಂಬುದರೊಳಗೆ ಚೊಚ್ಚಲದ ಸಂಭ್ರಮವು!
ದೈವದಾಟವು ಎಂದಿತಿಡಿಯು ಊರು.
ಮಗನು ಬಂದಿರೆ ಇಹಕೆ, ತಂದೆ ಏರಿದ ಪರಕೆ;
ಕ್ಷೀರಸಾಗರವಾಯ್ತು ಉಪ್ಪುನೀರು.
ತಂದೆ ಹಿಡಿದಿಹ ಹಾದಿ ಒಂದೆರಡು ದಿನದಲ್ಲಿ
ಕೂಸು ಹಿಡಿದಿತು; ತಾಯಿಗುಳಿದಿತೇನು?
ಮೈ-ಗೋರಿಯಲಿ ಮಡಗಿ ಜೀವ ಜೀವನವಾಯ್ತು
ಜೇನುಹುಳ ಉಳಿದಂತೆ ಕಳೆದು ಜೇನು.

ಸತ್ತೆನೆಂದಳು ಕೂಸು-ತಾಯಿ ಅಯ್ಯೋ ಎಂದು
ಭೋರೆಂದು ಗೋಳಿಟ್ಟು ಹೊಟ್ಟೆ ಹೊಸೆದು
ಹುಚ್ಚಿದ್ದು ಹೌಹಾರಿ ಹುಯ್ಯಲಿಟ್ಟಳು ಆಕೆ
ತನ್ನ ತಾ ಶಪಿಸಿದಳು ಹಲ್ಲು ಮಸೆದು.

ಹತ್ತು ದಿವಸಕೆ ಹಾಳುಮುತ್ತೈದೆತನ ಹೋಗಿ
ವೈಧವ್ಯಸಂಪತ್ತು ಪಡೆದಳಾಕೆ;
ಮನೆಯವರು ವೈದಿಕರು, ಊರು ಧರ್ಮದ ತವರು;
ಶಾಸ್ತ್ರವಿರೆ ಬೇರೆಯ ವಿಚಾರವೇಕೆ ?

ತಲೆಭಾರ ಇಳಿದಿತ್ತು, ಅಂಗಾರ ಬೆಳೆದಿತ್ತು;
ಮೈಯನ್ನು ಮುಚ್ಚಿತ್ತು ಕೆಂಪು ಸೀರೆ.
ಆದರಯ್ಯೋ ಪಾಪ ! ಆಕೆಯಿನ್ನೂ ಮಗುವು
ಸಿಂಗಾರವಿರದೆ ? ಆ ಮಾತೆ ಬೇರೆ.

ಹಿಟ್ಟು ಅವಲಕ್ಕಿಗಳ ಮೂಲಕ್ಕೆ ಹುಟ್ಟಿದಳೊ,
ಹೂಬತ್ತಿ ಹೊಸೆಯಲಿಕೆ ಮೈತಳೆದಳೊ,
ಎಂಬಂತೆ ಬಾಳ ಕಳೆದಳು ಬಾಲೆ; ಹೂಮಾಲೆ
ಮುಳ್ಳುಕಂಟಿಯ ಮೇಲೆ ತಾನೆಳೆದಳೊ !

ನಿಟ್ಟುಸಿರ ಸರದಲ್ಲಿ ಕಂಬನಿಯ ಪೋಣಿಸುತ
ಪುಟ್ಟ ವಿಧವೆಯು ಪುರಾಣಕ್ಕೆ ಬರಲು
ಗುಡಿಯ ಮೂರ್ತಿಗೆ ಮಂಕುಹಿಡಿದು, ಆಚಾರ್ಯರಿಗು
ಉರುಲಿಕ್ಕಿದಂತೆ ಬಿಗಿದಿತ್ತು ಕೊರಲು.

ಕುರುಡುಧರ್ಮಕ್ಕೆ ಸ್ಮಾರಕವು ನಿಂತಂತಾಕೆ
ಮೈಮರೆತು ನಿಂತಾಗ್ಗೆ ಗೂಗೆ ಹಾಡಿತ್ತು.
ಮುದ್ರೆಯೊತ್ತುವ ಕಣ್ಣು ಮೋರೆ ನೋಡಿತ್ತೊಮ್ಮೆ
ಜಾರ ಕೃಷ್ಣನ ಕಥೆಗೆ ಕೋಡು ಮೂಡಿತ್ತು!

# ಚಿಗರಿಗಂಗಳ ಚೆಲುವಿ

ಚಿಗರಿಗಂಗಳ ಚೆಲುವಿ ಬೆದಽರಿ ನಿಂತಾಳ ನೋಡೋ
ಬೆದಽರಿ ನಿಂತಾಳ ಪಲ್ಲ ॥

ಹೊಳಿಹಳ್ಳ ತೊರೆದಾವ್ರೋ
ಗೆಣೆಹಕ್ಕಿ ಬೆರೆದಾವ್ರೋ
ಆಗದವರ ಹೊಟ್ಟಿ ಉರದಾವ್ರೋ
ಗೆಣೆಯಾ ಉರದಾವಽ
ಅಂಥವರ ದಿಟ್ಟಿ ಮುನಿಮುರದಾವ;
ಅದನ ತಾ ಕಂಡು ಕೊರಗ್ಯಾಽಳೊ
ಮರುಗ್ಯಾಽಳೊ
ಸೊರಗ್ಯಾಽಳೋ
ಹೂ ಕಾಯಿ ಹಣ್ಣು ತುಂಬಿದ ಬನದಾಽಗ ॥ ಚಿಗರಿಗಂಗಳ. .

ಬ್ಯಾಟಿ ನಾಯೊದರ್ಯಾವ್ರೋ
ಹಸುಜೀವ ಬೆದರ್ಯಾವ್ರೋ
ಗಳಗಳನೆ ಗಿಡದೇಲಿ ಉದರ್ಯಾವ್ರೋ
ಗೆಣೆಯಾ ಉದರ್ಯಾವಽ
ದಿನ್ನಿ ಮಡ್ಡಿ ಗುಡ್ಡ ಅದರ್ಯಾವ;
ಅದನ ತಾ ಕಂಡು ನೊಂದಾಽಳೊ
ಬೆಂದಾಽಳೊ
ಅಂದಾಽಳೊ
‘ ಇದು ಎಂಥಾ ಜೇವದ ಬ್ಯಾಟಿ ಹಾಡೇ ಹಗಲಽ॥ ಚಿಗರಿಗಂಗಳ. .

## ಸಖೀಗೀತ

ಆಳುಗಳ ಹೋರಾಟ
ಆಳುವವರಿಗೆ ಆಟ
ಗಾಳಕ್ಕ ಸಿಕ್ಕ ಮೀನದ ಗೋಳಾಟೊ
ಗೆಣೆಯಾ ಗೋಳಾಟೋ
ಗೆದ್ದವರ ಇದ್ದವರ ಹಾರಾಟ;
ಅರೆಸತ್ತ ಜೀವಾ ಕೊಳೆತಾಽವೊ
ಹುಳತಾಽವೊ
ಅಳತಾಽವೋ
ಹಸುಗೂಸು ತಿರುಗಿ ಹೊಟ್ಟ್ಯಾಗ ಹುಗಿದ್ಹಾಂಗ॥ ಚಿಗರಿಗಂಗಳ. .

ತನ್ನ ತಾ ಸುತ್ತ್ಯಾಳೊ
ಹೊತ್ತಿನ ಬೆನ್ಹತ್ತ್ಯಾಳೊ
ತಿಂಗಳನ ಬಗಲಾಗೆತ್ತ್ಯಾಳೊ
ಗೆಣೆಯಾ ಎತ್ತ್ಯಾಳೋ
ಉಕ್ಕುಕ್ಕುವ ದುಃಖ ಒಳಗೊತ್ತ್ಯಾಳೊ;
ನಿಂತ ನೆಲವೆಂದು ಕಡಿಲಾಽಕೊ
ಬಡಿಲಾಽಕೊ
ಒಡಿಲಾಽಕೊ
ಒಡವ್ಯೆಲ್ಲೋ ಮಗನೇ ಉಸಿರಿದ್ದೊಡಲಂತಾಽಳೋ॥ ಚಿಗರಿಗಂಗಳ. .

## ಬೈರಾಗಿಯ ಹಾಡು

ಇಕೋ ನೆಲ—ಅಕೋ ಜಲ
ಅದರ ಮೇಲೆ ಮರದ ಫಲ
ಮನದೊಳಿದೆ ಪಡೆವ ಛಲ
ಬೆಳೆವಗೆ ನೆಲವೆಲ್ಲ ಹೊಲ
ಜಲಧಿವರೆಗು ಒಂದೆ ಕುಲ
ಅನ್ನವೆ ಧರ್ಮದ ಮೂಲ
ಪ್ರೀತಿಯೆ ಮೋಕ್ಷಕ್ಕೆ ಬಲ
ಇದೇ ಶೀಲ ಸರ್ವಕಾಲ ॥ ಇಕೋ ನೆಲ..

# ಧಾರವಾಡದ ತಾಯಿ

ನಿನ್ನ ಕಣ್ಣಾ-ಕಡೆಗೋಲಿಂದ
ನನ್ನ ಹೃದಯ ಕಡೆಯೇ ತಾಯಿ
ಎನ್ನ ಹೃದಯ ಕಡೀ..
ಬೆಣ್ಣೆ ಮೇಲೆ ತೇಲಿಸಿ ತಂದು
ನಿನ್ನ ಬಾಯ್ಗೆ ಹಿಡೀಯೆ ತಾಯಿ
ನೀನೆ ಬಾಯ್ಗೆ ಹಿಡೀ ॥ ಪಲ್ಲ ॥

ಧಾರವಾಡದ ತಾಯೇ । ನನಗಾ- । ಧಾರ ನಿನ್ನದಲ್ಲದಿಲ್ಲ
ಭಾರ ನಿನ್ನ ಮೇಲೆ ಇರಲು । ಯಾರಿಗಾರು ಎಂಬರೇನೇ ?
ಎನ್ನ ಹೃದಯ ಕಡೀ..

ಕಾಮಮೆತ್ತಿ ಬತ್ತಿದ ಮನಕೆ । ನೇಮ ನಿತ್ಯ ಬಂತೆಲ್ಲಿಂದ
ಪ್ರೇಮವಾಹಿನಿ ನೀ ಹರಿಯದಲೆ । ತಾಮಸ ತಾ ಹರಿದೀತೇನೇ ?
ಎನ್ನ ಹೃದಯ ಕಡೀ..

ಗಂಗೆ ನೀನು ಗೌರಿ ನೀನು- । ತ್ತುಂಗ ದುರ್ಗದ ದುರ್ಗೆ ಮತ್ತೆ
ತುಂಗಭದ್ರೆ ಶಾಲ್ಮಲೆ ನೀನ- ಭಂಗವಾಗಿ ಹರಿ ನನ್ನಲ್ಲಿ
ಎನ್ನ ಹೃದಯ ಕಡೀ..

ಅಂಬಿಕಾತನಯನು ನಿನ್ನ । ನಂಬಿ ಇನ್ನೂವರೆಗೂ ಇರುವ
'ಜಂಭ ನೀನೆ ಕಾಯಿ' ಎಂದು । ತುಂಬಿ ನಿನ್ನಡಿದಾವರೆಗಾದಾ
ಎನ್ನ ಹೃದಯ ಕಡೀ..

## ಮೊದಲ ಮಾತು

ಈ ಗೀತದಲ್ಲಿ ನನ್ನ ಜೀವನಕಥೆಯ ಹಂದಿರದ ಮೇಲೆ ಸಾಮಾನ್ಯ ಸಂಸಾರದ ಸುಖ-ದುಃಖದ ಹಂಬನ್ನು ಹಬ್ಬಬಿಟ್ಟಿದ್ದೇನೆ. ಹಿಂದೀಯರ ಜೀವನದಲ್ಲಿಯೂ ಕಾವ್ಯದಲ್ಲಿಯೂ ದಾಂಪತ್ಯ-ಪ್ರಣಯಕ್ಕೆ ಸ್ಥಾನ ಇಲ್ಲ. ಕಾವ್ಯದಂತೆಯೆ ಜೀವನದಲ್ಲಿಯೂ ಪ್ರಣಯದ ವಿಲಾಸವು ವೇಶ್ಯಾವಾಟದ ಆವರಣದಲ್ಲಿ ಮಿಂಚಾಡುವದು. ಪಾಶ್ಚಿಮಾತ್ಯರ ಜೀವನದಲ್ಲಿಯೂ ಅವರ ಕಾವ್ಯದಲ್ಲಿಯೂ ಪ್ರಣಯಾರಾಧನವಿಧಿಗೆ ನಿಶ್ಚಿತವಾದ ಕ್ರಮವಿದೆ ಎಂದು ಹೇಳುವದುಂಟು. ಆದರೆ ಈ ವಿಧಾನವು ಸಂಪೂರ್ಣವಾಗಿ ಸತ್ಯವಲ್ಲ. ಯಾವ ವಿಧಿ, ಕ್ರಮಗಳು–ಅಲ್ಲಿ ಇಲ್ಲಿ–ಇರಲಿ ಬಿಡಲಿ, ಮಾನವನ ಅವಿವೇಕ ಸುಳಿದಾಡಿದಲ್ಲೆಲ್ಲ ಪ್ರೇಮದ ಕೊಲೆಯು ಅಯಾಚಿತವಾಗಿ ನಡೆಯುವದು. ಪಾಶ್ಚಿಮಾತ್ಯರ ಪ್ರಣಯ-ಲೀಲೆಯ ಕೊನೆಗೆ ಬರುವ ಮದುವೆಯಲ್ಲಿ ವಿಯೋಗದ ಲಕ್ಷಣವು, ವಿರಹದ ಚಿತ್ರವು, ಪ್ರೇಮದ ಸಮಾಧಿಯು ಕಟ್ಟಿಹೋಗಿದ್ದುಂಟು. ನಮ್ಮಲ್ಲಿ ವಿವಾಹ-ಪೂರ್ವ-ಪ್ರಣಯದ ಸಂಚಾರಿ-ಭಾವಗಳಿಗೆ ಎಡೆಯಿಲ್ಲ; ಮದುವೆಯ ಸ್ಥಾಯಿಯಲ್ಲಿ, ಅನುದ್ದೀಪಕ ಏಕಾಂತ ಗುಹೆಗಳಲ್ಲಿ ರತಿಯು ರಸಾಪೇಕ್ಷೆಯಿಂದ ನವೆಯಬೇಕು. ಪಾಶ್ಚಿಮಾತ್ಯರಲ್ಲಿ ಕುರುಡು

ಸಖೀಗೀತ

ಕಾಮನಿಗೆ ಸ್ವೈರಸಂಚಾರವಿದ್ದರೂ ರತಿಗೆ ಮಾತ್ರ ಋತು-ಋತು ವಿಗೂ ಮರಣಭಯ ತಪ್ಪಿಲ್ಲ. ನಮ್ಮಲ್ಲಿಯೊ ಕಾಮನು ಅನಾದಿಕಾಲ ದಿಂದ ಅನಂಗನಾಗಿರುವದರಿಂದ ರತಿಯು ವಿಲಾಪಾಶ್ರುಗಳಿಂದಲೆ ಪ್ರೇಮವಲ್ಲರಿಯು ಕಮರಬೇಕು, ಇಲ್ಲವೆ ದೈವಕೃಪೆಯಿಂದ ಚಿಗುರ ಬೇಕು. ಅಥವಾ ಪತಿಯೊಲವಿಗೆ ಪಣ ತೊಟ್ಟ ಸತಿಯ ಪ್ರಣಯ ಸಾಹಸವೆಲ್ಲ ತಪದ ವೈರಾಗ್ಯ-ವಿಲಾಸವಾಗಿ, ಬೂದಿಯೊಳಗಿಂದಲೆ ಅಡಗಿದ ಬೆಂಕಿಯೆದ್ದಂತೆ ಕೊನೆಗೆ ಪಳಬೇಕು. ಪಾಶ್ಚಿಮಾತ್ಯರ ಸರಸವು ವಿರಸದ ಪ್ರಸ್ತಾವನೆ; ನಮ್ಮ ರಸವೇ ನೀರಸ. ಹೀಗೆ ಸಾಮಾನ್ಯವಾಗಿ ತೋರಿದರೂ ಹಿಂದೀಯರ ವೈವಾಹಿಕ-ಜೀವನವೇ ಸಂಸ್ಕಾರವಂತರ ಮನೆಗಳಲ್ಲಿ ಜೀವಮಾನದುದ್ದಕ್ಕೂ ಪ್ರಣಯ ಪರಿಪಾಕದ ರೀತಿಯಾಗಿಯೇ ಇದೆ. ಅಗ್ನಿಸಾಕ್ಷಿಯಾಗಿ, ದಾನವಾಗಿ ಬಂದ ಕನ್ನೆಯನ್ನು ಸ್ನೇಹದ ಅಭ್ಯಾಸದಿಂದ, ಸುಖದುಃಖಗಳಲ್ಲಿ ಸಮಭಾಗಿಯಾಗುವ ಸಹಾನುಭೂತಿಯ ಅಂತಃಕರಣದಿಂದ ಸಖಿ-ಯನ್ನಾಗಿ ಮಾಡುವ ಕ್ರಮವೊಂದು ಎಡೆಬಿಡದೆ ಸಾಗಿರುವದು. ಆ ಕ್ರಮದಲ್ಲಿ ಸ್ನೇಹದ ವಿವಿಧ ರೂಪಗಳೂ ತಮ್ಮ ತಮ್ಮ ಪಾತ್ರವನ್ನಾಡಿ ನಾಯಕಪಾತ್ರಕ್ಕೆ ರಸಭಾವಗಳ ಪ್ರಭಾವಲಯವನ್ನು ಕಟ್ಟುವವು. ಅಂತಹ ಚಿತ್ರವೊಂದು ಸಖೀಗೀತದಲ್ಲಿದೆ.

ಕಾವ್ಯನಾಯಕನು ತನ್ನ ಸಖಿಗಾಗಿ ತಮ್ಮ ಜೀವನ-ಪೂರ್ವ-ಭಾಗದ ಸ್ಮೃತಿಗಳನ್ನು ಹಾಡಲುದ್ಯುಕ್ತನಾಗಿದ್ದಾನೆ. ಮದುವೆಯ ದಿನದ ಸಂಜೆಯ ಸ್ಮೃತಿಯಿಂದ ಗೀತವು ಪ್ರಾರಂಭವಾಗುವದು.

**ಕಥೆಯ ಹಂದಿರ**

ಪ್ರಾರಂಭದ ಹುಮ್ಮಸ, ಹೊಸದರ ಹೊಸಹೊಸತನ, ಶೋಭನದ ಶುಭಾವರಣಗಳಲ್ಲಿ ವಿವಾಹಿತ-ಪ್ರಣಯವು ಪ್ರಸ್ತಾವನೆಯನ್ನು ಹಾಕುವದು. ಅಕಲ್ಪಿತವಾದ ಚೊಚ್ಚಿಲ ಸಂಭ್ರಮ, ಅದು ಕಳೆದುದರಿಂದ ಕಾವ್ಯನಾಯಕನ ತಾಯಿಗೇ ಆದ ಸಂಕಟ, ಸೊಸೆಯ ಮರುಚಲವನ್ನು ಮಗುವಾಗಿ

ಕಾಣುವ ಪೂರ್ವದಲ್ಲಿಯೆ ಆ ತಾಯಿಯು ಸಾವು, ಅದರಿಂದ ದಂಪತಿಗಳು ಎಲ್ಲೆಲ್ಲೊ ಇದ್ದುದು ವಿರಹಸಂಚಾರದ ಸೂಚನೆಯಾಗುವದು. ಹೊಸ ಮಗುವಿನ ಕೂಡ ದಂಪತಿಗಳು ಆಡಿದ ಆಟ, ಕಲಿತ ಪಾಠಗಳು ಕೆಲಕಾಲವನ್ನು ಹೊಸಯಿಸುವವು. ಅದರ ಬೇಸರವೂ ಬರುವದು; ಜೀವನದ ರಮ್ಯತೆ ಏಕೋ ಮುಸಕಾಗುವದು. ಕಥೆ ಕಾದಂಬರಿಗಳ ವಾಚನದಿಂದ ಜೀವನವನ್ನುದ್ದೀಪಿಸಿಕೊಳ್ಳುವ ಹವಣಿಕೆ ಬಹಳ ಫಲಕಾರಿಯಾಗುವದಿಲ್ಲ. ಈ ಮಧ್ಯೆ ಮಕ್ಕಳ ಆಗು-ಹೋಗು ಇವರ ವೃತ್ತಿನೀಕ್ಷೆಯ ಮೇಲೆ ಕೈಯಾಡಿಸುವದು. ಆಗೀಗ ಕಷ್ಟ ಕಣಕುವದು; ಆದರೆ ಸುಖವು ಬಂದಾಗ ಅನೇಕಮುಖವಾಗಿ ಬರುವದು. ಮಕ್ಕಳು, ಮನೆ, ಕೆಲಸ, ಗೆಳೆತನ ಎಲ್ಲಕ್ಕೂ ಕಳೆಯೇರುವದು. ಹೊಸ ಮನೆಯ ಹೊಸ ಸೃಷ್ಟಿ ಈ ಸಂಸಾರಕ್ಕೆ ತನ್ನ ಸಂಸ್ಕಾರ ಕೊಡುವದು. ಚಿತ್ತ ಚಿಗುರುವದು; ಕಾವ್ಯವಾಗುವದು. ಆದರೂ ಬಿಗುಮಾನದ ಮೌನವು ಹೃದಯ-ದುರ್ಗದ ದುರ್ಗಮತೆಯನ್ನು ಸಾರುವದು. ಇದೇ ಕಾಲಕ್ಕೆ ಗಾಂಧಿ-ಚಳವಳಿಯಲ್ಲಿ ಕೆಲಸ ಹೋಗಿ, ಬಂದಿವಾಸ ವನವಾಸಗಳಾಗಿ, ಉಳಿದ ಕಾರ್ಯಗಳೂ ಹರಿದು ಹಂಚಿ ಹೋಗುವವು. ದೇಶಾಂತರವಾಗುವದು. ದಂಪತಿಗಳಲ್ಲಿ ಮನೋವ್ಯಥೆಯ ಒಂದು ಸತ್ತ್ವಪರೀಕ್ಷೆಯ ಕಾಲವೇ ಬಂದು ಹೋಗುವದು. ಈ ಕಷ್ಟಕ್ಕೂ ಒಂದು ಸುಖದ ಮುಖವಿತ್ತು. ಆದರೆ ಅದೂ ಬಹಳ ಕಾಲ ಬಾಳಲಿಲ್ಲ. ಹಾದಿಯೇನು? ಎನ್ನುವ ಹೊತ್ತಿಗೆ ದೈವವು ಸಹಾಯಕವಾಗಿ ಬಂದಿತು. ಕನ್ನಡ ದೇಶಕ್ಕೆ ನಾಯಕ ಬಂದನು. ಮುಂದಿನ ಹಾದಿಯಲ್ಲಿ ಸಖ್ಯವು ಫಲಿಸುವದೆಂಬ ಆಸೆಯಲ್ಲಿ ಸಖೀಗೀತದ 'ಪೂರ್ವಾನುರಾಗ'ವು ಸಮಾಪ್ತವಾಗುವದು. ಹೀಗಿದೆ ಕಥೆಯ ಸಂಚಾರ.

ಈ ಗೀತವನ್ನು ಹೇಳಿ, ಹಾಡಿ, ಕೋಲು ಹಾಕಿ, ದಂಪತಿಗಳು ರಿಂಗಣಗುಣಿತ ಮಾಡಿದಾಗ ಅದರ ಸ್ವಾರಸ್ಯವು ಇನ್ನೂ ಚೆನ್ನಾಗಿ

ತಿಳಿಯುವದೆಂದು ತೋರುವದು. ಮಾತುಗಳನ್ನು ಉದ್ದಕ್ಕೂ ತಾಲ-ಲಯಗಳಿಗೆ ಸರಿಯಾಗಿ ದ್ರುತ ವಿಲಂಬಿತವಾಗಿ ನುಡಿಸಬೇಕು.

ಗೀತವು ಅರ್ಧಕ್ಕೇ ನಿಂತಿದೆ. ಮುಂದಿನ ಭಾಗವನ್ನು ಎಂದು ಬರೆಯಲಾಗುವದೋ, ಬರೆಯುವೆನೋ ಹೇಳಲಾರೆ. ಪ್ರೇಮ-ಪರಮಾತ್ಮನಿಗೆ ಈ ಮಾತಿನ ನೈವೇದ್ಯವು ನಿವೇದಿತವಾಗಿ ಪ್ರೀತಿಯ ಪ್ರಸಾದವು ನನಗೆ ದೊರೆತರೆ ಜೀವಿತಕ್ಕೆ ಧನ್ಯತೆಯ ಮುದ್ರೆ ಬೀಳುವದೆಂದು ನನ್ನ ಹಂಬಲ. ಇದರ ಮೇಲೆ ದೇವರ ಚಿತ್ತ....

ಅಂಬಿಕಾತನಯ ದತ್ತ

# ಸಖೀಗೀತ

ಸಖಿ! ನಮ್ಮ ಸಖ್ಯದ ಆಖ್ಯಾನ ಕಟು ಮಧುರ
ವ್ಯಾಖ್ಯಾನದೊಡಗೂಡಿ ವಿವರಿಸಲೇ
ಕರುಳಿನ ತೊಡಕನು ಕುಸುರಾಗಿ ಬಿಡಿಸಿಟ್ಟು
ತೊಡವಾಗಿ ತಿರುಗೊಮ್ಮೆ ನಾ ಧರಿಸಲೇ
ಇರುಳು ತಾರೆಗಳಂತೆ ಬೆಳಕೊಂದು ಮಿನುಗುವದು
ಕಳೆದ ದುಃಖಗಳಲ್ಲಿ ನೆನೆದಂತೆಯೆ
ಪಟ್ಟ ಪಾಡೆಲ್ಲವು ಹುಟ್ಟು-ಹಾಡಾಗುತ
ಹೊಸವಾಗಿ ರಸವಾಗಿ ಹರಿಯುತಿವೆ.

ಗಂಗೆ ಸಾಗರಬಿದ್ದು ಸಾಗರವನಪ್ಪುತ
ಅರೆಬೆರೆತ ನೆರೆಬೆರೆತ ತಾಣದೊಲು, ೧೦
ಸುಖದುಃಖ ಸಂಗಮವಾದ ಹೃದ್ರಂಗವು
ಪಾವನವೆಂಬೆನು ಯಾವಾಗಲು
ಬಾ ಅಲ್ಲಿ ಕಡಲಲ್ಲಿ ತೆರೆ ತೆರೆಯುನೊಡೆವಲ್ಲಿ
ನೀರ್ ಬುರುಗು ಬಿಡುವಲ್ಲಿ ಮೀಯೋಣ ಬಾ
ತೆಪ್ಪವೊ ತಾರಿಯೊ ಹರಗೋಲೊ ಹಡಗವೊ
ತೆರೆ-ತೊಡೆ-ತೊಟ್ಟಿಲನೇರೋಣ ಬಾ.

ಸಪ್ಪೆ ಬಾಳುವೆಗಿಂತ ಉಪ್ಪುನೀರೂ ಲೇಸು
ಬಿಚ್ಚು ಸ್ಮೃತಿಗಳ ಹಾಯಿ ಬೀಸೋಣ ಬಾ
ಬೀಸೋಣ ಈಸೋಣ ತೇಲೋಣ ಮುತ್ತಿನ
ತವರ್ಮನೆ ಮುಟ್ಟನು ಮುಳುಗೋಣ ಬಾ ೨೦
ತಾಂಡವ ನಡೆಸಿದ ಝುಂಝಾವಾತದ
ಕಾಲಿನ ಹುಲುಗೆಜ್ಜೆ ನಾವಾಗಿರೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

"ಮಾಂದಳಿರ ತೋರಣ ಹೂವಿಡಿ ಗುಡಿಗಟ್ಟಿ
ಮಧುಮಾಸ ಹೊರಟಿತ್ತು ನಿಬ್ಬಣಕೆ
ಚಂದಿರದೇವನ ಮುಗಿಲ ಮಂದಿರದಲ್ಲಿ
ಕಣ್ಣಿದಿರು ಕೌಮುದಿ ಕುಣಿಯುತಿರೆ
ಮಂತ್ರದ ತಂತ್ರದ ಮುಂದಿವಾಳದ ಮದುವೆ
ಸಂದಣಿಯಲಿ ಹೇಗೊ ಮೆರೆಯುತಿರೆ ೩೦
ಅಂತಃಪಟದಾಚೆ ವಿಧಿ ತಂದ ವಧು ನೀನು
ಮಾಲೆಯ ಸಾವರಿಸಿ ನಿಂತಿದ್ದೀಯೆ.

ಮುತ್ತಿಗು ಮುಗಿಲಾಗಿ ಹೂವಿಗು ಹಿರಿದಾಗಿ
ಬೆವರ್ಹನಿ ಬಾಸಿಂಗ ತುಳುಕುತಿರೆ
ನತ್ತನು ನಾಚಿಸಿ ಬೆವರಿನ ಹನಿಯೊಂದು
ಮೂಗುಬಟ್ಟಿನ ಅಂದ ಮಿನುಗುತಿರೆ
ಆಟದ ಕನ್ನಿಕೆ ಮಂಗಳ ಲಗ್ನಕೆ
ಮಾಲೆಯನಿಕ್ಕುತ ಮಡದಿಯಾದೆ;
ನಾಟಿಸಿ ಕಣ್ನೋಟ ಸೋಕಿಸಿ ಕೈಬೆರಳು
ಮರವಟ್ಟ ಮನ-ಬನ ಚಿಗುರಿಸಿದೆ. ೪೦

ದೈವದ ಪುತ್ಥಳಿ ಮನ ತೆತ್ತು ಮೈವೆತ್ತು
ಮೈಮೆಯ ನಿನ್ನೊಡ ತಂದಿರುವೆ
ಜೀವದ ಭೂಮಿ ನೀ ಮರಿಮಕ್ಕಳನು ಪಡೆದು
ಮನೆತನ ಮುಂದರಿಸ ಬಂದಿರುವೆ
ತನುಮನಧನದಲ್ಲಿ ಪಾಲುಗಾರತಿಯಲ್ಲ
ನೀನೇನೊ ಹಿಗ್ಗಲಿಸ ಬಯಸಿರುವೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

ಹಸೆಯಲ್ಲಿ ಹುಸಿಯೂಟವಾಡಿಸಿ ನೋಡುತ್ತ
ಹಿರಿಯರು ನಲಿನಲಿದಾಡುತಿರೆ ೫೦
ಮನೆಸಿದ್ದ ಮರುಕವು ಮಿಂಚುತಲಿದ್ದಿತು
ಹೊಂಚಲಿ ಒಳಸಂಚು ಮಾಡುತಿರೆ
ನೀನು ದೊಡ್ಡವಳಾದೆ ವೈಸಲಿಗೆ ಬೆಳೆಸಿದೆ
ಏಕಾಂತಕೆಳೆಸಿದೆ ಎಳೆ-ಕೆಳದಿಯೆ
ಏನು ಸಂಭ್ರಮವದು ! ಹರೆಯದ ಹಬ್ಬವು
ಕನಸು ಮನಸೂ ಹೆಣೆದು ಬೆಳೆಬೆಳೆದೆವೇ.

ಹೆರಳಿನ ಮಾಲೆಯು ಕಣ್ಣಿನ ಕಾಡಿಗೆ
ತುಟಿಯು ತಂಬುಲ ಉಗುರ ಮದರಂಗಿಯೇ
ಕೊಳಲ ನುಡಿಸುತಿತ್ತು ರಾಗ ಮಿಗುತಲಿತ್ತು
ನಿಂತ ನಿಲುವೆಲ್ಲವೂ ತ್ರಿಭಂಗಿಯೇ ೬೦
ಕಿವಿಮಾತ ಸೊಗಸೇನು ಆಡಿದ್ದಾಡುವದೇನು
ಹಳೆಸದ ಮುದ್ದಾಟ ಒಸಗುತಿರೆ
ಸವಿ ಬಂತು ಮುನಿಸಿಗು, ಕಳೆ ಬಂತು ಕನಸಿಗು
ಮೋಹದ ಮಾಟವನೆಸಗುತಿರೆ.

ಹಗಲೆಲ್ಲೊ ಹಾರಿದವು ಇರುಳೆಲ್ಲ ಜಾರಿದವು
ಋತು ಸಿದ್ಧಿಯಾಡಿದವು ಬಗುರೆಯೊಲೇ
ನಗೆಯು ನೊರೆಯು ಕೆಳಗೆ ಮೊರೆವ ಬಯಕೆಯು ಕಡಲು
ತೆರೆತೆರೆ ತೆರನಾಗಿ ತೆರೆಯುತಿರೇ
ಸನೆಕೊನೆ ಕಾತಿತು ಅತ್ತೆಯ ಸೊಸೆ-ಮುದ್ದು
ಚೊಚ್ಚಲಬಸಿರಿ ನೀ ಎದೆ ತೆರೆದೆ ೭೦
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

ಬಡವರ ಸಿಂಗಾರ ಬಯಕೆಗೆ ಮೂಲವು
ನವಮಾಸ ಅಲಸಿಕೆಯಲಿ ಕಳೆದೇ
ಹುಡುಗನ ಜೋಗುಳ ಮುಗಿಲ ಮುಟ್ಟುವದಿತ್ತು
ಮಿಂಚಿತು ಕಾರ್ಯವು ಸೀನುಳಿದೇ
ಏಕಾಕಿ ಸಿಡಿಲಾದೆ ತಾಯಿಯು ಕಂಗೆಟ್ಟು
ಆವಳ ಕನಸಿನ ಕಳಸ ಹೊಡೆಮರಳಿತೇ
ನೂಕಿದೆ ಕಾಲವ ಮಾಗಿಯ ಮಂಜಿಗೆ
ಮಂಜರಿ ಬಾಡಿದ ಮಾಪಿನೊಲೇ. ೮೦

ಮೊದಲಿನ ಫಲವೊಂದು ಮೊಸಲು ಮಣ್ಣಿಗೆ
ಎಂಜಲುಗೊಳುತಿತ್ತೊ ಮುದ್ದಿಸಿರೆ
ತುದಿಕಳಿಸಿ ಬಂದಿದ್ದ ಕಣ್ಣೀರ ತಳಿಯಿಂದ
ಕಣ್ಣೆಂಜಲು ಮಾಡಿ ಮಸಣನೊಳೆ
ಮರುಳಿದೆ ಮನೆಯತ್ತ ಮರುಳಂತೆ ನೆರಳಂತೆ
ಕರುಳೆಲ್ಲ ಕಡಲೊಲು ಕುದಿಯುತಿರೆ
ಬೆರಗಾದೆ ಬೆಪ್ಪಾದೆ ನಿಮ್ಮಿಬ್ಬರ ಅಳಲು
ಮೌನ ಮೊಟಿದ ಹಾಗೆ ನರಳುತಿರೆ.

ಆಸಿವಸಿಯಲಿ ಕುಸಿದ ತಾಯಾಸೆ ಕತ್ತೆತ್ತಿ
ಕಣ್ಣೆತ್ತಿ ಮತ್ತೊಮ್ಮೆ ಕುಡುರದಿರೆ ೯೦
ಬಿಸಿಗೆ ಬೆಚ್ಚಿದ ಎದೆಯು ಮರುಚಲ ಬಸಿರಿಯ
ಬಯಕೆಗೆ ತಗುಬಗೆಯಾಗುತಿರೆ
ಕನಸಿಗು ಹೊಳೆಯದ ಬರಸಿಡಿಲೆರಗಿತು
ತಾಯಿ-ಗಿಡವು ಮಾಯವಾಯಿತೆಲೇ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

ನೆಲೆ ತಪ್ಪಿದ ಹಕ್ಕಿ ಅಲೆವಂತೆ ಮುಗಿಲಲಿ
ಹತ್ತು ದಿಕ್ಕಿಗೆ ನಾನು ಹಾರಾಡಿದೆ
ಒಲವಿಗೆ ಹುಡುಕಾಡಿ ಬಾಳಿಗೆ ಎಡುಕಾಡಿ
ಷಡ್ರಸ ನವರಸ ರುಚಿ ನೋಡಿದೆ. ೧೦೦
ಕೂಸಿನ ಹೊಸ ತಾಯಿ ನಸು ವಾಯೆ ಬೀಸುತ
ನೀನು ನನ್ನೊಡನಿಂತು ಒಲೆ ಹೂಡಿದೆ
ಎೂಸಲು ಮುರಿಯದ ಒಲವಿಗೆ ಬಾಯ್ಬಿಡದೆ
ಕಣ್ಣೊಡ್ಡಿ ಹುದುವಿನ ಸವಿ ಬೇಡಿದೆ.

ಸಿಟ್ಟೆಷ್ಟೊ ಸೆಡವೆಷ್ಟೊ ತಿಳಿದೆಷ್ಟೊ ತಿಳಿಯದೆ
ತಪ್ಪು ಆಗುವದೆಷ್ಟೊ ದಿನಬಳಕೆಗೆ
ಬಿಟ್ಟೊಬಿಡದೆ ಬೇಟ ಸಾಗುತಿತ್ತು
'ಬೇಟೆ ಆಟದ ಹಾಗೆ ದಣಿದಣಿದೆವೆ
ಹುಸಿನಗುವ ಕೂಸಿನ ಹೊಸ ಹೊಸ ಆಟಕೆ
ಮನಸೋತು ಮುನಿಸನ್ನು ಅರೆಮರೆತೆವೆ ೧೧೦
'ಬೆಸೆದಿದ್ದ ಜೀವದ ಬೆರಕೆಯಾಗಲುಬೇಕು
ಪಡೆದ ಜೀವವ ಕಂಡು' ಎಂದರಿತೆವೆ.

ಬಾಳಿನ ಬೆಂಕಿಗೆ ಮೈ ಬೆಂದು ಮನ ನೊಂದು
ಬಲುಮೆಯು ಒಲುಮೆಯು ಕುಲುಮೆಯಲೇ
ತಾಳಿಕೆ ಬರುವಂಥ ಉಕ್ಕಾಗಿ ಒರುತಿರೆ
ಮುಕ್ಕಾದ ಮೊನೆಯೀಗ ಮಸೆಯುತಿದೆ
ಮಿಸುಗುವ ಮಿಂಚಾಗಿ ಮುಂಚಿನ ಕೈಧಾರೆ
ಕಣ್ಣೀರಲಾಗಾಗ ತೊಳೆಯುತಿರೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ! ೧೨೦

ಛಟ್ಟೀ ಮುಂದಿನ ಬಿಟ್ಟಿ ಮೋಡವು ಒಂದೊಂದು
ಗಳಿಗೆಯು ನೆರಳಾಟ ಹೂಡುವೊಲೆ
ಬಿಟ್ಟಿಗೆ ಒಂದನು ಹೊಸದೊಬ್ಬ ಕಂದನು
ಅತಿಥಿಯೋ ಎಂಬಂತೆ ತೆರಳಿದನೇ
ಈಗಿತ್ತು ಈಗಿಲ್ಲ ಎಂಬೀ ಬಾಳೋ ಹಾಳೊ
ಗತಿಯೆತ್ತೊ ಗುರಿಯೇನೊ ಎನ್ನುತ್ತಲೇ
ಹಾಗಿದ್ದ ಬಾಳುವೆ ಹೇಗಾರೆ ಸಾಗಿಸಿ
ಎಡಹುತ್ತ ತಡವುತ್ತ ನಡೆದಿದ್ದೆವೆ.

ಇದ್ದಷ್ಟು ದಿನವಾರೆ ಇರುವಷ್ಟು ಪ್ರೀತಿಯು
ಇನ್ನಷ್ಟು ರುಚಿ ನೋಡಿ ಹೋಗುವದೇ ೧೩೦
'ಬಿದ್ದ ಕಾಲಕೆ ಹಾದಿ ಹಿಡಿದದ್ದೆ ನಡುಬೀದಿ'
ಎನ್ನುವರಂತೆಯೆ ಸಾಗಿದ್ದೆವೇ
ಮಗುವಿನ ನಗುವೊಂದು ನಮಗಿದ್ದ ನೆಚ್ಚೊಂದು
ಬಾಳಿನ ಹುಚ್ಚೊಂದು ಮೆಚ್ಚೆಂದೆವೇ
ಹಗಲಷ್ಟು ಹುಡುಗಾಟ ಇರುಳಿಗೆ ಬೆಡಗಾಟ
ಕಹಿಯಾಗದಿದ್ದದ್ದೇ ಹೆಚ್ಚೆಂದೆವೇ.

ನಿನ್ನೆಡೆ ಕರೆಯುವೀ ನೀ ನನ್ನ ಮತ್ತೆನ್ನ
ಕನ್ನಡ ಕರೆವುದು ತನ್ನೆಡೆಗೆ
ಚಿನ್ನಾಟ ನನಗಿದು ನಿನಗದು ಅಗಲಿಕೆ
ಮೌನದರಣ್ಯಕೆ ನೀ ಬೆದರಿದೇ ೧೪೦
ನನಗಿತ್ತು ಹಳೆಮಾತು ಸವಿಸುಡಿ ನಿನಗೇನು
ನಾನೊಂದು ಮಗುವೊಂದು ರಂಜನೆಗೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ

ಹೊಸದೊಂದು ಹಸಿವಿಗೆ ಒಗೆ ಬಾಯಿದೆರೆದಿತ್ತು
ತಿಳಿಯದೆ ನಿನ್ನೊಳಗಸ್ವರೊಳೆ
ಹಸುಮಗು ಹಾಲಿನ ರುಚಿ ಸಾಕು ಎನುವಂತೆ
ಸಪ್ಪನೆಯ ಒದುಕಿಗೆ ನೀ ಹೇಸಿದೆ
ಗೊಂಬೆಯಾಟದೊಳಿದ್ದ ತನ್ಮಯ ಮಾಯೆಯು
ನಿಜ ಬಾಳಿನೆಲ್ಲೆಲ್ಲು ಕಾಣದಲೆ ೧೫

ರಂಬಿಸಕೊಳಲೆಂದು ಚಿಕ್ಕಂದು ಕೇಳಿದ್ದ
ಕಥೆ ಹಾಡುಗಳನ್ನೆಲ್ಲ ನೆನೆನೆನೆಸಿದೆ.

'ಹಿಂಗೊಬ್ಬ ಅರಸಿದ್ದ' ಎನ್ನುತ್ತ ಎಂದೆಂದು
ಕಾಲಿಲ್ಲದ ಕಥೆ ಸಾಗುತಿರೆ
ಹ್ಯಾಂಗಾರೆ ಕಥೆ ಮುಗಿದು ಕಾಡಿಗೆ ಹೋಗಲು
ಬೆರಗಿಲೆ ಮೊಗವಗಲಾಗುತಿರೆ
ಮಾಜಲಿ ಮೊಗ ಮೊದಲು ಎಡರೆಷ್ಟೋ ಬರುತಿರಲಿ
ಮುಗಿತಾಯ ಸಿಹಿಸಕ್ಕರೆಯಾಗುತಿರೆ
ರಾಜಪುತ್ರಿಗೆ ಕೊನೆಗೆ ಕಟ್ಟಿಟ್ಟ ಹಾಗೆಯೆ
ರಾಜಪುತ್ರನು ಬರುವ ಹೇ ಸುಖವೇ! ೧೬೦

ಅಟ್ಟಂಬಟ್ಟಾರಣ್ಯದೊಳು ರಾಕ್ಷಸನು ಒಂದು
ಹೊಸನಾತ ಎನ್ನುತ್ತ ತಿನ್ನಲಿರೆ
ಸತ್ತರೇಸತ್ತರೇಸಲ್ಲಿಗೈತರುವರು
ಶಿವಪಾರ್ವತಿ ಅನರನೆಬ್ಬಿಸಲೇ
ಗೊನೆಗೊಂದು ಸವಿಹಣ್ಣು ಬಿಟ್ಟರೆ ಒಟ್ಟಿಗೆ
ಒದುಕಿನ ಮರವೆಲ್ಲ ಚೆಲುವಲ್ಲವೇ?
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

'ನವಿಲೇ ನವಿಲೇ ಮಳೆ ಬಂದಾಗೆಲ್ಲಿದ್ದೆ ?'
'ತಿರುಮಲೆರಾಯನ ತೋಪಿನೊಳೇ !' ೧೭೦
ಕವಿದಿರೆ ಕತ್ತಲು ಮನವೊಂದು ಇತ್ತಲು
ಕೇಕೆ ಹಾಕಲುಬೇಕು ಕೇಳಿಯೊಳೆ
'ಮಾಗಿಯ ಕಾಲಕ್ಕೆ ಹೇಗಿದ್ದೆ ಕೋಗಿಲೆ ?'
'ಹೋಗಿದ್ದೆ ಬನವಾಸಿ ವನವಿನೊಳೆ'
ಸೊಗಕೊಂದು ಠಾವುಂಟು, ಋತುಬದಲಾದರೇ-
ನೆಮಗೆಮ್ಮ ಬಿತ್ತರದ ಭೂಮಿಯೊಳೇ.

'ತಾಯಿಕಾಣದ ಜೀವ ತಾವೂರಿ ಬಾವೂರಿ'
ಎಂದೆನಲು ಕಂಬನಿ ಒಡೆಯುತಿರೆ
ಹಾಯಾಗಿ ಹಾಡಿದೆವು 'ಆಡಿ ಬಾ ಎನ ಕಂದ'
ಬೇರೊಂದು ತಂತಿಯು ಮಿಡಿಯುತಿರೆ ೧೭೫
ಹುಡುಗನ ಒಡ ನಾವು ಹುಡುಗಾಟವಾಡಿದೆವು
ಹುಡುಗತನವು ಮರಳಿ ಬಂದಿತೆನೆ
ಒಡಕು ಕಣ್ಮರೆಗಾಗಿ, ಮಿಡುಕು ಮರೆತಂತಾಗಿ
ಹುಡುಕಿದೆವು ಇನ್ನೊಂದು ಲೋಕವನೆ.

'ಗುಜುಗುಜು ಮಾಪುರೆ' ಎನುತಿತ್ತು ಎದೆಯಲ್ಲಿ
ಗುಜುಗುಜು ಕಿವಿಮಾತು ಆಡಿದೊಲೆ
ಗಜಗ ತೂರಿದ ಹಾಗೆ ತಿರುತಿರುಗಿ ಹಾರಿದವು
ಹಳೆ ನೆನವು ಮತ್ತೊಮ್ಮೆ ಹಾಡಿದೊಲೆ
ಮನದಾಡುಂಬೊಲದಲ್ಲಿ ಮೈಮರೆತು ಕೂಡಿದೆವು
ಚಿತ್ರಗಳಾದೆವು ಚಿತ್ತದೊಳೆ ೧೮೦
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ !

ಯವನಯಾಮಿನಿ-ಕಥಾ-ಕೌತುಕದ ಕಡಲಲ್ಲಿ
ಕೌತೂಹಲಿಯಾಗಿ ನೀ ಧುಮುಕಿದೆ
ಕಪನ-ಕಾಮಿನಿಯರ ಕಳ್ಳರ ಕುಡುಕರ
ಒಳ್ಳೆಯವರ ಜೀವನವ ಕದುಕಿದೆ
ಆ ವೀರಶೃಂಗಾರ, ಸಸ್ಮಿತ ವಿಸ್ಮಯ,
ರುದ್ರಭಯಾನಕವನು ನೋಡಿದೆ
ನಾನೀಗ ಉಣುತಿರುವ ಕರುಣದ ಹಾಸ್ಯದ
ಪರಿಯನೆ ಅಲ್ಲಿಯೂ ನೀನೋದಿದೆ. ೨೦೦

ಒಗೆ-ಬಾನ ತುದಿಯಿಂದ ನಡುನಡುವೆ ಮುಗಿಲೊಂದು
ಕಿಡಿಗೇಡಿಯೊಲು ಏಕೋ ಗುಡುಗುತಿರೆ
ನಗೆಯಾಟ ಹೊಗೆಯೇರಿ ನುಡಿಯಲ್ಲಿ ಕಿಡಿ ಹಾರಿ
ನಮ್ಮೆದೆ ತಾನಾಗಿ ನಡುಗುತಿರೆ
ಹಳವಂಡ ಕನಸನ್ನು ಕಂಡವನು ನೆನೆನೆನೆಸಿ
ಯಾಕೇನೊ ತಬ್ಬಿಬ್ಬಾಗುವೊಲೆ
ಎದೆ ಹೊಕ್ಕು ಕಂಡರೂ ತಳ ಕಾಣದಾಗಲು
ಕಂಗೆಟ್ಟು ಮನ ತಣ್ಣಗಾಗುತಿರೆ.

ಬಸಿರೆಂಬ ಕುತ್ತೊಂದು ತುತ್ತಲಿರುವ ಹಾಗೆ
ಆಗ ಕಂಡಿತು ನಿನ್ನ ಮುಖದ ಕಳೆ ೨೧೦
ಗ್ರಹಣದ ಮುಂಛಾಯೆ ಬಿದ್ದ ಬಿಂಬದ ರೀತಿ
ವೇಧವು ಹಿಡಿದಿತ್ತು ತಾ ತನ್ನೊಳೆ
ಜನುಮಕು ಮರಣಕು ಒಳಸೂತ್ರ ಇರುವದ
ಕಂಡಾಗ ಇತಿಮಿಯಾಯ್ತೆನಗೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

ಸುಗ್ಗಿಯು ಬರುವಾಗ ತರುವುದು ಸಂಗಡ
ಮೂಂದಳಿರ ಮಲ್ಲಿಗೆ ಮೊಗ್ಗುಗಳ
ಅವು ತರುವವು ಗುಂಗಿ ಗುಂಜಾರವವನು
ಕೋಗಿಲೆಯ ಪಂಚಮದಿಂಚರವ ೨೨೦
ಹೊಂಗೆಯು ಹೂವಿನ ರಂಗವಲ್ಲಿಯ ಬಿಡಿಸಿ
ನೆರಳನು ನೀಡುತ ನಿಲ್ಲುವುದು
ಮುತ್ತುಗ, ಬೂರಲ, ದೀಪಮಾಲೆಯ ಕಂಬ
ಗಗನದ ಬಯಲೊಳಗೆತ್ತುವುದು.

ಸುಖ ತಾನು ಬರುವಾಗ ಗುಳೆ ಎತ್ತಿ ಬರುವುದು
ಒಂದಲ್ಲ ಎರಡಲ್ಲ, ಪರಿವಾರವೆ:
ಕಂದನ ಕಿರಿಕಿರಿ ಕಿಲಿಕಿಲಿ ನಗುವಾಗಿ
ಹೊಸಮನೆ ಗಮಗಮ ಎನ್ನುತಿರೆ
'ಜಯಕರ್ನಾಟಕ'ವೆನ್ನುತ ಗೆಳೆಯರ
ಕನ್ನಡದಾಸೆಯು ಗುಡಿಕಟ್ಟಿತು ೨೩೦
ಮುಂದಿನ ಏನೇನೊ ಕನಸಿನ ಕಳಶ ಗೋ-
ಪುರಗಳ ಕಲ್ಪನೆ ಮೇಲಿಟ್ಟಿತು.

ಜೀವದಾಸೆಗಳೆಲ್ಲ ಹೊಸೆದು ಹುರಿಗೊಳ್ಳುತ
ನಮ್ಮ ಮನೋರಥವೆಳೆಯುತಿರೆ
ಗರುಡನ ಹಕ್ಕಿಯು ಗರಿಗೆದರಿ ಹಾರಿತು
ಬಾನಾಗ ಕರೆದಿತು ಬರಿ ಹಾಲನೆ
ಗಾಳಿಯು ಊದಿತು ಹೊಡೆಯು ಹೆಡೆದೂಗಿತು
ದಿಕ್ಕೆಲ್ಲ ನಮ್ಮನೆ ನೋಡುತಿವೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ ೨೪೦

ಮಲೆನಾಡ ಸೆರಗಿನ ನೆರೆಗಿಪ್ಪ ಮನೆಯೊಂದು
ಮಮತೆಯ ಕುರುಹಾಗಿ ತಾ ದೊರಕಿತು
ಅಲ್ಲಿ ಸಂಪಿಗೆಯಿತ್ತು ಪಾರಿಜಾತಕವಿತ್ತು
ಮಾವು ಮಲ್ಲಿಗೆಯಿತ್ತು ಮನೆಯೆದಿರು
ಮುಗಿಲ-ಮಲ್ಲಿಗೆಯಿತ್ತು ತೆಂಗಿತ್ತು ಹಲಸಿತ್ತು
ನಿಂಬೆಯು ಇಂಬಿತ್ತು ಎಡೆಎಡೆಗೆ
ಹೊಂಗೆಯು ಸಾಲಿತ್ತು ಕಣ್ಮುಂದೆ ಕೆರೆಯಿತ್ತು
ಗುಡ್ಡದ ನೆರೆಯಿತ್ತು ಅದರಾಚೆಗೆ.

ವೃಕ್ಷವಾಟಿಕೆಗಳಲಿ ಒಳಬಳಸಿ ಹೋಗುವ
ಹಾದಿಬೀದಿಗಳುಂಟು ನಾಲ್ಕೆಡೆಗು ೨೫೦
ತೋಪು ತೋಟಗಳುಂಟು ಜೋಳದ ಹೊಲವುಂಟು
ಭತ್ತದ ಗದ್ದೆಯು ಬದಿಬದಿಗು
ಬನದೇವಿಯೆಡೆಯಾಟಕೆಡೆಗೊಡುವ ಗುಡ್ಡದ
ಸಾಲಿನ ತೋಳುಂಟು ಪಡುವಲೊಳು
ಶಬರಿ ಪಾಮರಿಯರ ಸುಳಿದಾಟ ನಲಿದಾಟ
ಸುಗ್ಗಿಸುಗ್ಗಿಗು ಉಂಟು ಅದರದರೊಳು.

ಋತುಗಳ ಏರಿಳಿತ ಕಾಳ ರಿಂಗಣಗುಣಿತ
ಬಿಡಿಬಿಡಿಸಿ ಬರೆದಂತೆ ಚಿತ್ರದೊಳು
ಬಡವರ ಅಲೆದಾಟ, ಹೊಟ್ಟೆಯ ಬೆಂಬತ್ತಿ
ಗುಳೆಯೆತ್ತಿ ಹೊರಟವರ ಹೋರಾಟವು ೨೬೦
ದುಡಿವರ ತಿರುಕರ ಕೂಲಿ ಕುಂಬಳಿಯುವರ
ಜೀವನ ಮೂಡಿರೆ ಹಾದಿಯೊಳೆ—
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

ಅಲ್ಲಿರುತಿರುಳಾಗಿ ಸಹಜವಾಗಿಯೆ ನನ್ನ
ದೃಷ್ಟಿಯು ಸೆಟ್ಟಿತು ಸೃಷ್ಟಿಯೊಳು
ಮಳೆಯಾಕೆ ಚಳಿಯಾಕೆ ಭೂಮಿಯು ಬೆಳೆಯಾಕೆ
ಬಿಸಿಲಾಕೆ ನನ್ನಾಕೆ ನೆರೆಯಾದರು
ಇರುಳವಳು ಹಗಲವಳು ಬೆಳಕು-ನೆಳಲಿಸವಳು
ಬೆಳದಿಂಗಳವಳು ನಮ್ಮವಳಾದಳು 120
ಗಿಡಮರದ ತೂಗಾಟ ಹಸುಹಕ್ಕಿ ಕೂಗಾಟ
ಚಿನ್ನಾಟ ನನ್ನಾಟ ಒಂದಾದವು.

ಗಾಳಿಯು ಹಾರಾಟ ಏರಾಟ ಚೀರಾಟ
ಭೋರಾಟ ಕುಣಿದಾಟ ತುಳಿದಾಟವು
ಎಳೆದಾಟ ತೂರಾಟ ಎಲೆಗಳ ಕಳೆವಾಟ
ಸುಟ್ಟುರೆಯು ಗಾಳಿಯು ಹುಡಿಯಾಟವು
ಛಂದೋಗತಿಯು ಚೆಂದ, ತಾಳ-ಲಯದಾನಂದ
ಸ್ವಚ್ಛಂದ ಬಂಧವ ಕಲಿಸಿದವು
ನಾದ ಬಳಕೆಯು ನುಡಿಗೆ ಸೋತಿದ್ದ ಮನವನ್ನು
ಹಾಡಿನ ಮೋಡಿಗೆ ಒಲಿಸಿದವು. 130

ಹಾವುಗಳರಮನೆ ಹೂವಿನ ತವರ್ಮನೆ
ನಮ್ಮನೆ ನೆರೆಹೊರೆಯುವರೆನ್ನಲು
ನರಿನಾಯಿ ಇದಿರಾಗಿ ವಾದಿಸಿ ಬೆಚ್ಚಿಸಿ
ಎಚ್ಚರಿಸಿ ನಿದ್ರೆಗೆ ನೆರವಾದವು
ಕುರಿಯಾಡು ದನಕರು ಓಡಾಡಿ ಕೂಡಾಡಿ
ನಾಡಾಡಿಗಳು ನಾವು ಜೋಡಾದೆವೇ !
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

ಎಳ್ಳ ಅಮಾಸಿಗೆ ಎಳ್ಳಷ್ಟು, ಅಪರೆಯು
ಕಾಳಷ್ಟು ಬೆಳೆದಿತ್ತು ಅಪರಾತ್ರಿಗೆ ೨೯೦
ಬಿಸಿಲಲ್ಲ, ಬೇಯಿಸುವ ಬೆಂಕಿಯು ! ಬೇಗೆಯು
ಶಿವಶಿವ ಎನಿಸಿತ್ತು ಶಿವರಾತ್ರಿಗೆ
ಕಾಮನ ಸುಟ್ಟಿತ್ತು ಬಾನೆದೆ ನೆಟ್ಟಿತ್ತು
ಸುರಿಬೆವರು ಹುಟ್ಟಿತ್ತು ಜನದೆದೆಗೆ
ಪಾನಕವೆಂದಿತು ಪ್ರಾಣ ನಿತ್ರಾಣಿಸಿ
ಸ್ನಾನಕೆ ಹಸಿದಿತ್ತು ಮೈ ಧಗೆಗೆ.

ಬೇಸಿಗೆಯುಟ್ಟಲು ಬೀಸಣಿಗೆ ಬೀಸಾಡಿ
ಮರುಳಾಟದಲಿ ಜನ ತೊಳಲುತಿರೆ
ಜೋಲ್ದಿವೆ ಇಳಿಸುತ ಅರನಿದ್ದೆ ಮರೆಯಲ್ಲಿ
ಹಗಲುಗನಸಿಗೆ ಜೀವ ಬಳಲುತಿರೆ ೩೦೦
ಮಣ್ಣೆದೆಯಲಿ ಝುರಿಸುವ ನೀರ ಸೆಲೆಯಂತೆ
ಮಾಂಸದಿ ತೊರೆಯುವ ಹಾಲಿನೊಲು
ಬಿಸಿಲೆದೆಯನು ಬಿರಿದು ಬಯಸಿದ ಸುಳಿಗಾಳಿ
ಒಳಬಳ ಮೈಬಳಸಿ ಸುತ್ತಾಡಿತು.

ಬೇವೇನು ಮಾವೇನು ಸರುಗಂಪ ನೆರಳಿಗೆ
ನಿದ್ರಾಂಗನೆ ಮನವೆಳೆಯುವಳು
ಚಂದನ ಗಂಧವ ಬೇಡಿತ್ತು ಕೊರಳೆದೆ
ಸಂಪನ ನೆನೆಸಿತ್ತು ಉಸಿರಾಟವು.
ಬಾಳದ ತಂಪಿನ ಕಪ್ಪುರಗಂಪಿನ
ನೀರೆ ಜೀವನವೀಗವೆನಿಸುತಿದೇ ೩೧೦
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

ಹೋಳಿಹುಣ್ಣಿವೆ ಬಿಸಿಲು ಕಾಮನ ಸುಡಲೆಂದು
ತೆರೆದಿದ್ದ ಉರಿಗಣ್ಣ ತೆರೆದಲಿರೆ
ಬೇಳುವೆಯೊಳಗಿಂದ ಬೆಳಕೆದ್ದು ಬಂದಂತೆ
ಬಾಳುವೆಯ ಸುಳಿಯೊಂದು ಸೀಳಿಬರೆ
ಸತಿಯರ ಹೃದಯಸ್ಥ ಸುಪ್ತರತಿಯು ತಾನು
ತಿಳಿದೆದ್ದ ಸಂಗನಾಲಿಂಗಿಸಿರೆ
ಮತಿ-ಮಥನದಿಂದಾದ ಮನ್ಮಥನನಿರುದ್ಧ
ಉಷೆಯ ಕನಸಿನ ಕೂಡ ಕೂಡುತಿರೆ. ೩೨೧

ಮಾಸೆಲ್ಲ ಕಾತಿತ್ತು ಮಲ್ಲಿಗೆ ಹೂತಿತ್ತು
ಕೋಗಿಲೆ ಕೂತಿತ್ತು ಕಾಣದೊಲೆ
ಕಾವಿನ ಕಾಹುರಕೆ ಸುಗ್ಗಿಯ ನೇವುರವೋ
ಮೈ ಜುಮ್ಮು ಝುಮುಝುಮು ಎನ್ನುತಿರೆ
ದಿಕ್ಕುದಿಕ್ಕಿಗೆ ಸುಗ್ಗಿ ಪಂಚಮದಿಂಚರ
ಮುತ್ತಿಟ್ಟು ಮರುಮರುಳಿ ಬರುತಲಿರೆ
ಮಲಮಲ ಎನ್ನುವ ಮಲ್ಲಿಗೆಯಂದದಿ
ಚಿಗುರು-ಪ್ರಾಯದ ಮನ ಮಲರುತಿದೆ.

ಚೈತ್ರ ವೈಶಾಖಗಳು ಜೈತ್ರಯಾತ್ರೆಗೆ ಹೊರಟು
ಪ್ರಾಯವ ಕೈಸೆರೆಗೊಳುತಲಿರೆ ೩೩೦
ಮೈತ್ರಿಯ ಬೀಜವು ಮದುವೆ ಮುಹೂರ್ತಕೆ
ಆಗಾಗ ಕಲ್ಲೊಳು ಬೀಳುತಿದೆ
ಹೋಮ-ಧೂಮಗಳಲ್ಲಿ ಉರುಳಿದ ಕಂಬನಿ
ಗಲ್ಲದಲ್ಲಿಯೆ ಆರಿಹೋಗುತಿವೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

ಆಷಾಢದ ಮುಗಿಲು ಬೀಸಾಡಿ ಬಂದವು
ಈಸಾಡಿ ಬಂದಂಥ ಆನೆಗಳೇ
ರೋಷದ ತೋಷದ ಬೆಡಗು ಬಿನ್ನಾಣವ
ಬೀರುವ ಬಿಂಕದಿ ಮೆರೆಯುವೊಲೇ ೩೪೦
ಉಚ್ಚತ್ತ ಕಾಮಗೆ ಪಚ್ಚೆಯ ಪಸದನ
ಕಾಣಿಕೆಗೊಡುವಂತೆ ನೆಲವೆಲ್ಲವೆ
ಹಚ್ಚ ಹಸಿರಾಯಿತ್ತೊ ಹುಚ್ಚು ಹಸಿರಾಯಿತ್ತೊ
ಹುಚ್ಚು ಹಿಡಿಸಿತು ನೋಡೆ ಲೋಚನಕೆ.

ಬಂದಿತು ಶ್ರಾವಣ ಹೃದಯ ವಿದ್ರಾವಣ
ಕಾನನ ಕಾವಣವಾಗುತಿರೆ
ಪಡುಗಾಳಿ ಹಾಡಿತು ಗಿಡಬಳ್ಳಿ ಆಡಿತು
ಹೊಲ-ಹುಲ್ಲು ನೋಡಿತು ಲೀಲೆಯೊಳೆ
ನಿರ್ವಕ್ಕಿ, ಬಾನಕ್ಕಿ, ಬೆಳ್ಳಕ್ಕಿ ಹಾಲಾಗಿ
ಸಾಲಾಗಿ ಮೇಲಾಗಿ ಹಾರುತಿರೆ ೩೫೦
ಮಿನ್ಗಳು, ಮಿಂಬುಲಿಗ, ಮಿಂಚುಹುಳ ಮಿಂಚಿನ
ಬಳಗವೊ ಎಂಬಂತೆ ತೊಳತೊಳಗಿರೆ.

ಮೋಡದ ದುರ್ದಿನಕೆ ಮಾರ್ದನಿ ಬರಲಿಲ್ಲ
ಎದೆಯೆಲ್ಲ ಘನನೀಲ ವ್ಯಾಪಿಸಿರೆ
ಗುಡುಗಿಗೆ ನಡುಗದೆ ಅಡಗಿದ ದುಂದುಭಿ-
ರವವೊಂದು ಒಳಗಿವಿ ಕೇಳುತಿರೆ
ಗಕ್ಕನೆ ಸಿಲ್ಲಲು, ಹೌಹಾರಿ, ಹಗಲಲ್ಲೆ
ಇರುಳಾಗೆ, ಧ್ವನಿಯೊಂದು ಏಳುತಿದೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ! ೩೬೦

ವರ್ಷಾಕಾಲದ ಭಾಷೆಗೆ ಭಾಷ್ಯಕೆ
ಬರೆದ ವಾರ್ತಿಕದಂತೆ ಕಾರ್ತಿಕವು
ತಿರುಳೆತ್ತಿ ಹುರುಳೆತ್ತಿ ತೆನೆತೆನೆ ತೋರುವದು
ಬೆಂಡಿಗು ಸವಿಯಿತ್ತು ನೆಲಹೊಲವು
ಬರ್ಚಿಗಾರರ ಬಲವೆ ಬೀಡಾರ ಬಿಟ್ಟಂತೆ
ಒಟ್ಟಿಲದಲಿ ಜೋಳದ ನೆಲುವು
ಆಳೆತ್ತರವಾಗಿ ನಿಂತಿದೆ ಕಾಳಾಗಿ
ಬಯಲಿಗೆ ತಾಸರಸನೆನ್ನುವೊಲು.

ಕೃತ್ತಿಕೆಯ ಮಣಿಹಾರ ಕೊರಳಿಂದ ಬಿಡಿಸಲು
ಬಿಳಿಮುಗಿಲ ಬೆಡಗನ್ನೆ ಇರುಳುಟ್ಟಿತ್ತು ೩೭೦
ಮೃಗಶಿರದ ಮಂಚಕೆ ಚಂದಿರ ಬರುವಾಗ
ಚಂದ್ರಿಕೆಯ ವಾತ್ಸಲ್ಯ ತೆರೆಬಿಟ್ಟಿತ್ತು
ಲೋಕದ ಅನ್ನವು ಲೋಕದಂತೆಯೆ ತಾನು
ಹಂಪುಗಾಲದ ಬೆಳೆಯು ಹಾಲುಂಡಿತ್ತು
ಬಾಂದಳದ ಬೆಳ್ಳಿಗೆ ಭೂಮಿಯು ಬಂಗಾರ
ಸಿಂಗಾರ ಮೊಗವೆತ್ತಿ ಮುದ್ದಿಟ್ಟಿತ್ತು.

ಶಾರದ-ಶುಭ್ರಾಭ್ರ-ಶಾರದೆ ರಸದುಂಬಿ
ನಡೆಸಿದ ನವಿಲಿನ ನರ್ತನವೊ
ಕಾರ್ತಿಕಸ್ವಾಮಿಯು ತಾರಕನ ಗೆದ್ದಾಗ
ತಾರಗೆ ಹಚ್ಚಿದ ಕಾರ್ತಿಕವೋ ೩೮೦
ಎಂಬಂತೆ ನೆಲಮುಗಿಲು ಕಾಲವಿದ್ದರು ಕೂಡ
ನಂಜು-ಗಾಳಿಗೆ ಬೆದರಿ ಜನರಿಹರೇ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

ಹೊಸ್ತಿಲ ಹುಣ್ಣಿವೆಗೆ ಹೊಸ್ತಿಲ ನಡುಗಿತ್ತು
ಬನದ ಹುಣ್ಣಿವೆಗೆಲ್ಲ ಬನ ನಡುಗಿದೆ
ಮನೆ ನಡುಗಿ ಮನ ನಡುಗಿ 'ಏ ಹುಡುಗ, ಎಲೆ ಹುಡುಗ'
ಎನ್ನುವ ಸಲುಗೆಯು ಬೆಸುಗೆ ಬರೆ
ಮೈ ತಾಗಿ ಮನ ಬಾಗಿ, ಒಳಿತಾಗಿ, ಇಂಬಾಗಿ,
ನಾವಾಗಿ, ಈ ಮಾಗಿಗೊಳಗಾಗಿರೆ ೩೯೦
ಕೊಡುಕೊಳೆ ಎಂಬುದು ಇಮ್ಮುಖದಲಿ ಕೂಡ
ಒಮ್ಮುಖವೆಂಬಂತೆ ಆಗುತಿದೆ.

ಕಂಕ ವಿಶೃಂಖಲ ಬಿಂಕದ ಬೆನ್ನೇರಿ
ಬಾನೆಲ್ಲ ತಾನೊಂದೆ ಆಳುವೊಲೆ
ತೇಲುತಲೇರುತ ತೇರುತ ಸಾಗಿರೆ
ಏಕಾಕಿ ನಾಕಾಗಿ ನೆನಪಾಗಿರೆ
ಕಿಂಖೀಲಿ ಲಿಲಿಲೀಲಿ ಉಲಿದುಲಿದು ನಲಿನಲಿದು
ಕೆಳದಿಯ ಕೆಳೆ ಬಯಸಿ ಕರೆಯುತಿದೆ
ಆಕಾಶಪುಷ್ಪವು ಅರಳಿತ್ತು ಹೊರಳಿತ್ತು
ತೆರಳಿದ ದಿಟ್ಟಿಯೂ ಒಂದುಕಡೆ. ೪೦೦

ಕಾಲ್ಬಿದ್ದು ಕೈಹಿಡಿದು ಮುತ್ತಿಟ್ಟು ಮುಗಿಬಿದ್ದು
ಮೈಏರಿ ಮೈಹೊಕ್ಕು ಮಾಗಿ ಬರೆ
ಮೈಮೈಯುಡರುವ ಮಾಗಿಯ ಮೈಮೆಯೂ
ಬೆಳಗು ಮುಸುಕಿನಲ್ಲು ಒಗ್ಗುತಿರೆ
ಮಕರಸಂಕ್ರಾಂತಿಗೆ ಮೈತುಂಬ ತುಟಿತುಂಬ
ಎದೆತುಂಬ ಕುಸುರೆಳ್ಳು ಮೂಡುತಿದೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

ಕಾಮನ ಹುಣ್ಣಿವೆ ಹಣ್ಣಾಗಿ ಹರಿವಂತೆ
ತೊರೆಯಾಗಿ ನೆರೆಯಾಗಿ ಹೊನಲಾಗಿರೆ ೪೧೧
ಸೀಮೆಗೆ ಸೀಮೆಯೆ ಹುಚ್ಚು ಬೆಳುದಿಂಗಳದ
ಹಸದನದಲ್ಲಿ ಅಚ್ಚ ಹಸನಾಗಿದೆ
ಹಲಚಿಕ್ಕೆ ಚಂದ್ರಿಕಾ-ಜಲದಲ್ಲಿ ಮುಳುಗಿವೆ
ಕೆಲಚಿಕ್ಕೆ ಹಾಯಾಗಿ ತೇಲುತಿವೆ
ಮಲಗಿದ್ದ ಕಣ್ಣೆಲ್ಲ ಒಮ್ಮೆಲೆ ಎಚ್ಚತ್ತು
ಕಣ್ಣಾರೆ ಕುಡಿದರು ತೀರದಿದೆ.

'ಬಡವ ಬಲ್ಲಿದನೆಂಬ ಭೇದವದಿಲ್ಲದೆ
ಹಾದಿ-ಬೀದಿಗು ಸಂದಿಗೊಂದಿಯೊಳೆ
ಹಿಡಿಸದೆ ತುಂಬಿದೆ ತಗ್ಗಿಲ್ಲ ತೆವರಿಲ್ಲ
ಮಿಣುಕು-ತಾರೆಗಳಲ್ಲಿ ತುಳುಕುತಿಹೆ ೪೨೦
ಹೊದ್ದು ಮಾನವರೆಲ್ಲ ನಿದ್ದೆಯೊಳಿದ್ದಾಗ
ಸದ್ದಿಲ್ಲದೆ ಕದ್ದು ಮುದ್ದಿಡುವೆ
ಮುಗ್ಧ ಮಾತೆಯ ಹಾಗೆ, ಎದೆಹಾಲ ಎರೆಯುವೆ
ಚಂದ್ರಲೋಕದ ತಾಯಿ ಬೆಳುದಿಂಗಳೇ !'

ಭರತ ಇಳಿತದಲ್ಲಿ ತೊಟ್ಟಿಲಾಡಿಸುತಿರೆ
ಚಂದ್ರಿಕೆ ತಿಂಗಳು ತಿಂಗಳಕೆ
ಇರುಳ ಹಡಗಿನಲ್ಲಿ ಮರುಳು ಜೀವಗಳೆರಡು
ಧ್ರುವನಲ್ಲಿ ಕಣ್ಣಿಟ್ಟು ಸಾಗುತಿವೆ
ಅನುವಿರಲಿ ತಣಿವಿಗೆ ಎಂದೆಂದು ಕೌಮುದಿ
ಕಲುಬೇರದಿರಲೆಂದೆ ಕನವರಿಕೆ ೪೩೦
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

ಋತುಗತಿಯ ತತಿಯಲ್ಲಿ ಹದಬೆದೆ ಕಂಡುಂಡು
ಹವಣಾಗಿ ನಡೆದಿತ್ತು ಬಾಳುವೆಯು
ಕಾಲಮಾನದ ಹಾಗೆ ತಾಲಮಾನವ ಪ-
ಲ್ಲಟಿಸುತ್ತ ಹೆಜ್ಜೆಯ ಹಾಕುವೊಲು
ಪಾದ ಪದ್ಧತಿಯಲ್ಲಿ ಪದ ಕೂಡಿ ಒರುವಾಗ
ಯಾರಾರೆ ಗುರು-ಲಘು ಎಣಿಸುವರೆ?
ಯಾ ರಾಗವೆಂದರು ಯಾರಾಗ ಕೇಳುವರು
ಅನುರಾಗವನುರಣಿಸಿ ತಣಿಸುತಿರೆ? ೪೪೦

ಶಿವನ ಕುದುರೆಯನೇರಿ ಶ್ರಾವಣದ ಹಸರಾಣಿ
ಹೂಗಣ್ಣು ತೆರೆದಾಡಿ ಕುಣಿಯುವೊಲು
ನನ್ನ ಚಿತ್ರಕ-ಶಕ್ತಿ ಉತ್ಪ್ರೇಕ್ಷೆಯನೇರಿ
ಬಣ್ಣಬಣ್ಣದ ಬಣ್ಣನೆಗೆ ಒಲೆದಿತು
ಯಾವುದಕೆ ಯಾವುದು ಸರಿದೊರೆಯೆನ್ನುತ
ತನ್ನ ಗೆರೆಬಣ್ಣಗಳನ್ನೊರೆ ಹಚ್ಚಿತು
ಮನದಲ್ಲೆ ಮೂಲೋಕ ರಚಿಸುವ ಊಹೆಯು
ತನ್ನ ಚಿಂತನದಲ್ಲೆ ತಾ ಮುಳುಗಿತು.

ಕೊಟ್ಟದ್ದೆ ರೂಪವು ಇಟ್ಟದ್ದೆ ನಾಮವು
ಕಟ್ಟಿದ್ದೆ ಹುರುಳೆಂಬ ಮದದೊಳಿರೆ ೪೫೦
ಬ್ರಹ್ಮಪಟ್ಟವನೇರಿ ರೂಪಕ-ಶಕ್ತಿಯು
ಸೃಷ್ಟಿಯನಳೆದಿತು ದೃಷ್ಟಿಯೊಳೆ
ಕಾದು ಕೆಂಪಾಗಿತ್ತು ದುಃಖದ ಕೆನೆ ಕೂಡ
ಮನೆಮಠ ಮನ-ಮೈಗಳರೆಮರೆತಿರೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

ಹೆಣ್ಣು ಗಂಡಿಗೆ ಚೆಲುವು, ಗಂಡು ಹೆಣ್ಣಿಗೆ ಒಲವು
ಇದುವೆ ಹೆಣ್ಣಿಗೆಯು ಬಲವು ಮೂಲೋಕಕು
ಎಂಬೆನೇ ನಂಬೆನು ? ಕೂಗೀತು ಕೋಗಿಲ
ಕೇಕೆ ಹಾಕುತ ಕೇಕಿ ಕುಣಿದಾಡಿತು ೪೬೦
ಗಂಡುಗಾಡಿಗೆ ಮರುಳು, ಹೆಣ್ಣಿನ ಹೆಂಗರುಳು
ನಿಜ ಧೀರರ ನಿಲುವೇ ಚೆಲುವು
ಗಾರುಡಿಗರ ಮೋಡಿ ನಾಗಮೋಡಿಯು ಜೋಡಿ
ಹೆಣ್ಣಿನ ಮೋಡಿಯುು ಒಲೆದೊಲವು.

ಸೌಂದರ್ಯವೆಂಬುದು ಕಣ್ಣಿನ ತುತ್ತಲ್ಲ
ಕಣ್ಣಿಗು ಕಣ್ಣಾಗಿ ಒಳಗಿಹುದು
ರೂಪ-ಲಾವಣ್ಯಕ ಅಳೆಯಲುಬಾರದು
ಅವುಗಳೆ ಇದರೊಂದು ಕಣವಿಹವು
ಇದಿರಿಗೆ ಚೆಲುವಾಗಿ ಇದುವೆ ತಾನೆನುವಾಗ
ಒಲವಾಗಿ ಒಳಗಿಂದ ಹೊಮ್ಮುತಿದೆ ೪೭೦
ಅಲ್ಲಿತ್ತು ಸ್ವಾನಂದ, ಇಲ್ಲಿದೆ ರಸರಂಗ
ಎಲ್ಲೇನು ಒಂದೆಂದೆ ಚಿಮ್ಮುತಿದೆ.

ಎಲ್ಲಿಂದೊ ಬಂದೊಂದು ಸೌಂದರ್ಯ-ಝರಿಯಿಂದ
ಎದೆ ಎದೆಗು ಕಾರಂಜಿ ಪುಟಿಯುತಿದೆ
ಯಾರಿಂದೊ ಚಲಿಸುವ ಪ್ರಾಣದ ಸೂತ್ರವು
ಪುರುಷ-ಪ್ರಕೃತಿಗಳನು ಕುಣಿಸುತಿದೆ
ಘನರಸ ಆನಂದ; ಆನಂದದ್ರುವ ರಸ
ಯಾವದೊ ಕಾವಿಗೆ ಆಗುತಿದೆ
ನನಗೂ ನಿನಗೂ ಅಂಟಿದ ನಂಟನ
ಕೊನೆ ಬಲ್ಲವರಾರು ಕಾಮಾಕ್ಷಿಯೇ! ೪೮೦

'ಕುಣಿಯೋಣು ಬಾ' ಎಂದು ಪ್ರಣಯದೋಲೆಯನೊಂದು
ಎದೆವಾತಿನಿಂದೆದೆಗೆ ನಾನಟ್ಟಿದ್ದೆ
ಪ್ರತಿಭೆಯ ಗರ್ಭದ ವಿಶ್ವಕರ್ಮನ ಕರೆಸಿ
ಗಾಳಿಗೋಪುರವೊಂದು ನಾ ಕಟ್ಟಿದ್ದೆ
ವಾಗಿಂದ್ರ-ಜಾಲದ ಮಾಲೆಮಾಲೆಯ ಬೀಸಿ
ಸಪ್ತ-ಸ್ವರ್ಗದ ಶಿಖರವನು ಮುಟ್ಟಿದ್ದೆ
ನನ್ನ ಪಾಲಿಗೆ ಮಾತ್ರ ಹೇ ಪ್ರೇಮದೇವತೆ!
ಮೌನಮುದ್ರೆಯನಲ್ಲು ನೀ ತೊಟ್ಟಿದ್ದೆ.

ಅಪರಂಪಾರದ ಪಾರವಾರವು ಕೂಡ
ಎದೆಯ ತೆರೆತೆರೆ ತೆರೆದು ಹಾರುವುದು ೪೯೦
ಎಷ್ಟಾಳವಿದ್ದರು ಗಂಭೀರ ಕಾಸಾರ
ಸೂರ್ಯಕಿರಣಕೆ ತಳ ತೋರುವುದು
ಕೋಟಿ ಕ್ರೋಶಗಳಾಚೆಯಿಂದ ಗಗನೋದರದಿ
ಚಿಕ್ಕೆ ಹಾಸ್ಯದ ಕಿರಣ ಬೀರುವುದು
ದುರ್ಭೇಧ್ಯವೆನಿಸುವ ಮೌನ-ದುರ್ಗಕೆ ಮಾರ್ಗ
ತೋರದು ಎಂತಾರೆ ಸೇರುವುದು.

ಮಾತಿಗು ಮೌನಕ್ಕು ಯಾತರ ಒಗೆತನ?
ನೀರಿಗು ಕಲ್ಲಿಗು ಏನು ಜತಿ?
ಬಯಲಲ್ಲಿ ಭೋರಾಡಿ ಬವಣಿಗೊಳ್ಳುವ ಗಾಳಿ
ಭಣಗುಟ್ಟಿ ಬರುವದು ತಿರುತಿರುಗಿ ೫೦೦
ಒಳಗಿದ್ದ ಪ್ರಕೃತಿಗೆ ಒಳದನಿಯೊಂದಾಗ
ಅಂತರ್ಮುಖವಾಗಿ ಕರೆಯುವುದೇ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

ಮೌನದಲ್ಲಿಯು ಕೂಡ ಮಾತಿನ ಧ್ವನಿಯಿರಲಿ
    ಮೂಕ-ಮೌನವು ಒಂದು ಶಾಪದೊಲು
ತಾಪವ ಕೊಡುವುದು, ತಾ ಪರಿಹರಿಸದು
    ಜೀವ ಯಾತನೆಯನ್ನು ಅದು ಎಂದಿಗು
ಮಾತಿನಲ್ಲಿರುವಂಥ ಮೌನದ ಧ್ವನಿಯಿಂದ
    ಐಕ್ಯಲತೆ ಬೆಳೆಯುವದಿಬ್ಬರಲಿ ೫೧೦
ಇಬ್ಬರ ಮನವಾಗ ಇಬ್ಬಗೆಯಾಗುವುದು
    ಒಬ್ಬಗೂ ಸುಖವಿಲ್ಲ ಬದುಕಿನಲಿ.

ಪ್ರಣಯದ ವಾಣಿಯು ವೀಣಾ-ಪ್ರವೀಣನು
    ನುಡಿಸುವ ಮಿಡಿಸುವ ತಂತಿಯೊಲು
ಮನದೆಲ್ಲ ಮಾತನ್ನು ಮೌನದಿ ನೆನೆವಂತೆ
    ಎಳೆಯೆಣಿಸಿ ಗುಂಗುಣಿಸಿ ಬಿಡಿಸುವುದು
ಚಿಗುರಿಸಿ ಹೂವಿಸಿ ಕಾಯಿಸಿ ಪಣ್ಣಿಸಿ
    ಬಣ್ಣಿಸುವೊಲು ಜೀವ-ವಲ್ಲಕಿಯಾ
ಬಲ್ಲವ ಬಲ್ಲನು ಏಕತಾನದ ನಾದ
    ಜೀವನದುನ್ಮಾದ ಅನುಭವಿಯಾ. ೫೨೦

ನನ್ನ ಚಿತ್ತದೊಳಿರುವ ಚಿತ್ರಗಾರನು ಬರೆದ
    ಚಿತ್ರಕೆ ಬಹುದೆಂದೊ ಜೀವಕಳೆ?
ಅದು ಬಂದ ದಿನದಿಂದ ಮಾತು ಮೌನಗಳಲ್ಲಿ
    ಹಾಸಾದ ಹೊಕ್ಕಾದ ಉಸಿರಿನೆಳೆ
ವಾಣಿಯ ವೀಣೆಯು ತನನನದ ತಾನವು
    ಆ ವರೆಗು ತಂತನದ ಮನನವಿದೆ
ನನಗೂ ನಿನಗೂ ಅಂಟಿದ ನಂಟಿನ
    ಕೊನೆ ಬಲ್ಲವರಾರು ಕಾಮಾಕ್ಷಿಯೇ!

‘ ಅಕ್ಕೆಕ್ಕಿ ಭೋರಂಗಿ ಆಡಿಸಲು ಬೇಕೆಷ್ಟು ?
ಸೂಲಿನ ಎಳೆಯೊಂದು ಸಾಕಿಲ್ಲವೇ ? ೫೩೦
ಕಣ್ಣಸರಳಿಸೆ ಒಂದು ಕಿರಣವು ಸಾಕಿದೆ
ಜೀವಾಳ-ನುಡಿ ಜೀವನವ ಸಾಕಿದೆ
ಮುಖದ ಮುದ್ದಿಗಷ್ಟು ಮಂದಸ್ಮಿತ ಸಾಕು
ಸಾಕು ಗಾಳಿಯು ಸುಳಿಯು ಬೆಂದವಗೆ
ಇಲ್ಲದಿರೀ ಬಾಳು ಸಾಕು ಸಾಕೆನಿಸೀತು—
ಸಾಕು ಈ ಹಕ್ಕಿ; ಬಿಡು ಬೇಕಾದರೆ.

ಮಾಟವಿಲ್ಲದ ಆಟ, ಏನಾಟ ? ಎಳೆದಾಟ !
ಮಾಯಾ-ಸಂಸಾರಕ್ಕೆ ಮಾಯೆ ಬೇಕು
ಮಾಯಾಬ್ರಹ್ಮಗಳಂತೆ ಮುಖ ಬಯಲು, ಕಣ್ಬಯಲು
ಎದೆಬಯಲು, ಮೊದಲೆ ಉಸಿರು ಬಯಲು. ೫೪೦
ಬರಿ ಅಂತರಿಕ್ಷದಿ ಪಕ್ಷಿ ಹಾರೀತೆಷ್ಟು ?
ಬೇಕು ತಂಗಲು ಮುಂಗೈಯಾಸರೆಯು.
ಪಂಚೇಂದ್ರಿಯ ಸೃಷ್ಟಿ ಬೇಡುವ ಕವಿ ಒಂದು
ಗವಿ ಹೊಕ್ಕಂತಾಯಿತೇ ಸಹವಾಸವು ? ’

ಪುಟುಗುಟ್ಟುತ್ತಿರಲೆದೆ ತುಟಿ ಕಚ್ಚಿ ಹಿಡಿದಿದ್ದೆ
ನನ್ನಲ್ಲೆ ನಾನಿಲ್ಲ ಎಂಬಂತಿರೆ
ಹೊಸ ಪಟ್ಟಣವ ಹೊಕ್ಕು ಹಾದಿ ತಪ್ಪಿಸಿಕೊಂಡ
ಎಬಡ ಹಳ್ಳಿಗನಂತೆ ನಿನಗಾಗಿರೆ
ಸಡಗಿತ್ತು ಧರ್ಮವು, ಅಡಗಿತ್ತು ಇಷ್ಟವು
ಕಷ್ಟವೆ ಬಾಳೊಳು ಕರುವಿಟ್ಟಿರೆ ೫೫೦
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ !

ಮೋಹನದಾಸನ ಉಸಿರಿಗೆ ಬೀಸಿದ
ಬಿರುಗಾಳಿಯಾಗ ಸುಟ್ಟುರಿ ತಂದವು
ಒಣ-ಎಲೆ ಹುಡಿ-ಮಣ್ಣು ಸೊಪ್ಪು-ಸವದಿಗಳೆಲ್ಲ
ಮೋಡಗಳಾಡುವ ಎಡೆ ಕಂಡವು
ಹುಡುಗರು ಹುಚ್ಚಾಗಿ ತರುಣರು ಪೆಚ್ಚಾಗಿ
ಮುದುವರು ಸೆಚ್ಚಾಗಿ ನೋಡಿದರು
ಹಲಕೆಲವರು ತಾವೆ ಪುಕ್ಕ-ಹಕ್ಕಿಗಳಂತೆ
ದಿಕ್ಕುಪಾಲಾಗುತ ಓಡಿದರು. ೫೬೮

ಆಳುವರ ಸಂಶಯ-ಜಾಲವು ನಾಡಿಗೆ
ಕಂಡಂತೆ ಸಿಕ್ಕಲ್ಲಿ ಬಲೆಬೀಸಿತು
ಯಾರಾರೊ ಎಂತೇನೊ ಸೆರೆಸಿಕ್ಕುಬಿದ್ದರು
ಪುಣ್ಯವ ಪಡೆದವರೊಲು ಗೆದ್ದರು
'ನರಬಲಿ' ಕವನವು ಬಲಿಮಾಡಿತೆನ್ನನು
ಹೆಳವನಿದ್ದಲ್ಲಿಗೆ ಹೊಳೆ ಬಂದಿತು
ಮನೆಯನು ಮುರಿದಿತು ಹಾರು ವಿಹಂಗಮು !
ಜಂಗಮು-ದೀಕ್ಷೆಯು ಸಿನಗೆಂದಿತು.

ಪ್ರಾಣದ ಒಗರಷ್ಟು ಹಿಂಡಿತು ಹಿಂಡಲಿಗೆ
ಮುಗದದ ಮಲೆಗಾಳಿ ಮುಂದೆಳೆದಿತು ೫೭೦
ಆಳುವರ ಮೇಲೊಬ್ಬ ಆಳುವನಿರದಿರೆ
ಹಾಳಾಗಿ ಹೋಗಿತ್ತು ಈ ಜಗವು
ದಿಕ್ಕಿಲ್ಲದವರಿಗೆ ದಿಕ್ಕಾಗಿ ನಿಂತವನ
ಧ್ರುವನೊಡೆಯನ ನಿಲ್ಲು-ನೆಲೆ ಮಿಂಚಿರೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ !

'ಹರಿವ ನೀರಿನ ಮೇಲೆ ಹರಗೋಲ-ಮನೆ ಕಟ್ಟಿ
ಗೊತ್ತಿಲ್ಲವೆ ನಲ್ಲೆ ಹೊರಟಿಹೆವು ?
ನೆಲವೆಂದು ಸ್ಥಿರವೆಂದು ಅಸ್ತಿವಾರವ ಹಾಕಿ
ನಾಡಾಡಿ ಜನ, ಮನೆ ಕಟ್ಟಿಹುದು        ೫೮೦
ಪರಿಣಾಮಕ್ಕೆಡೆಗೊಟ್ಟು ಪರಣತಿಗೊಳ್ಳುವ
ಸೃಷ್ಟಿಗೆ ಸರಿ ನಮ್ಮ ಬಾಳುವೆಯು
ಕುದಿ ಎಸರು ಬರದಿರೆ, ಚಳಿ ಬಿಸಿಲು ಉಣದಿರೆ
ಪರಿಪಾಕವೆಂಬುದು ಎಂತಹುದು ?'

'ಅವರವರ ಕೆಚ್ಚಿಗೆ ಸರಿಯುವರ ನೆಚ್ಚಿಕೆ
ನಿಮ್ಮಂತೆ ನನಗಿಲ್ಲ ಆ ತ್ರಾಣವು
ತೊಟ್ಟಿಲ-ಜೀಕವ ತೂಗಿ ಕೈಬಿಟ್ಟರೆ
ಗಾಳಿಯು ರಾಟಾಲದೊಳು ಪ್ರಾಣವು
ತಿರುತಿರುಗಿ ಬಂದರು ತ್ರಿಳಗೆ ನೋಲೆಂದರು
ಮುಂದಿಲ್ಲ ಹಿಂದಿಲ್ಲ ಹಾಗೇ ಇದೆ
ಈ ಬಾಳ-ಬವಣೆಗೆ ಹವಣಿಲ್ಲ ಹತಿಯಿಲ್ಲ
ಕಂಗಳು ಏಕೋ ಕತ್ತಲಿಸುತಿವೆ.'

ಜೋಡಿ ಇಲ್ಲದ ಎತ್ತು ಎಳೆದಾಡುವ ಗಾಡಿ
ನಡೆದಂತೆ ತತ್ತರಿಸಿ ಒಗೆತನವು
ಹಗೆಯಾಗದಿರಲೆಂದೆ ಇಬ್ಬರೂ ಹವಣಿಸಿ
ಒಬ್ಬರನೊಬ್ಬರ ತೂಗಿದೆವು
ತ್ರಾಸು-ತಕ್ಕಡಿ-ಮುಳ್ಳು ಏಕಾಗ್ರವಿರುವಂತೆ
ಧಾರಣೆಯಲಿ ಕೆಲದಿನ ಕಳೆದೆವೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!        ೬೦೦

ಬೆಳಕಿನ ಕೆಚ್ಚನು ಕತ್ತಲೆಯ ಕಿಚ್ಚನು
ಮುಗದದ ಗವಿಯಲ್ಲಿ ನೆರೆ ಕಂಡೆವು
ಹುಚ್ಚಾಗಿ ನಕ್ಕೆವು ನಚ್ಚಿಗೆ ಸಿಕ್ಕೆವು
ನೆಚ್ಚಿಗೆಯಾತರದಿದೆ? ಎಂದೆವು
ಕೋಪದ ತಾಪದ ಪಾಪದ ಶಾಪದ
ಶ್ವಾಪದಗಳಿಗಂಜಿ ಒಳಹೊಕ್ಕೆವು
ಸೋತೆವು ಯಾವಾವ ಆಸೆಯ, ನೇಯದ
ನೂಲಿಗೆ ಜೋತೆವು ಮನಸೋತೆವು.

ಮಾರನೆ ಬೆಳಗಿಗೆ ಕೃತಯುಗ ಬಂತೇನೊ
ಎಂತೇನೋ ಎಸುವಂತೆ ಕುಣಿದಾಡುತ ೬೧೦
ಹಾಡನು ಕಟ್ಟಲು ಏಕನಾದವ ಹಿಡಿಯೆ
ಪ್ರಳಯಮೇಘದ ದಾಳಿ ಮೇಲೇರುತ
ಝುಂಝಾಪೂರುತ ಸಾರುತ ಹಾರುತ
ನೆಲಸಮಮಾಡಿತು ತೋಟವನು
ಕಿಡಿಗೇಡಿ ದೈವವು ನಮ್ಮೊಡನಾಡಿತು
ಯಾಕೇನೊ ಸಖಿ, ಹುಡುಗಾಟವನು.

ಗಾಣಿಗಗೆ ಸಿಟ್ಟಾಗಿ ಒಣರೊಟ್ಟಿ ತಿಂದಂತೆ
ಅಸಮಾಧಾನಕೆ, ರಸವಿಂಗಿಸಿ
ಹಾದಿಯ ದೆವ್ವವ ಮನೆಯೊಳಗೆ ಕರೆದಂತೆ
ಒಬ್ಬರನೊಬ್ಬರು ಮುಖ ಭಂಗಿಸಿ ೬೨೦
ಕೆಣಕಾಡಿ ಅಣಕಕೆ ಕಾದಾಡಿ ತೇದಾಡಿ
ತನುಮನ ಮನೆಗಳ ಕುಂದಿಸಿರೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

ಉರಿಮೋರೆ ಬಿರಿಗಣ್ಣು ಮುನಿಯು ಹೊತ್ತಿಸುತಿರಲು
ಕಾಡ-ಬೇಗೆಗೆ ಸಿಕ್ಕ ಮರಿಗಳೊಲು
ಪಕ್ಕಗಳು ಬಲೆತಿಲ್ಲ, ಹಾರಿಕೆ ಕಲಿತಿಲ್ಲ
ಮುಗಿಲನ್ನೆ ಮೊರೆಹೊಕ್ಕು ನೋಡುವವು
ಪಿಳಿಪಿಳನೆ ಕಣ್ಬಿಟ್ಟು ಕಂಡವು ಮಕ್ಕಳು
ಬೆದರು-ಗಣ್ಣುಗಳಿಂದ ಬೆಸಗೊಂಡವು ೬೩೦
ಏನಿದು ? ಏಕಿದು ? ಸಾಕಿದು! ಎದೆಗರಗಿ
ಕಣ್ಣನಿ ಉರುಳಿಸಿದವು, ನೊಂದವು.

ಮುಗ್ಧತೆ ಎಂಬುದು ದುಗ್ಧಸಾಗರವಹುದು
ಲೋಕಪಾಲನಶಕ್ತಿಯುದರೊಳಿದೆ
ಮಕ್ಕಳ ಮುಖದಲ್ಲಿ ಹೆಕ್ಕಳಿಸಿ ಹರಿಯುವ
ಜೀವಕಳೆ ಮುಪ್ಪು ಜುಕ್ಕುಲಿಸುತಿದೆ
ಈ ಮನದ ಮುಪ್ಪಿಗೆ ಇರುಹಿಕೆಯು ತಪ್ಪಿಗೆ
ಮದ್ದೆಂದು ಅವುಗಳ ಮುದ್ದುಂಡೆವು
ಕತ್ತಲೆಯು ಮನೆಯಿಂದ ಬೆಳಕಂಡಿಯೊಳಗಿಂದ
ಗಗನದ ನೀಲಿಮೆಯನು ಕಂಡೆವು. ೬೪೦

ದೇವನ ಕರುಣೆಯು ಕರುಳಿನ ತಿರುಳೊಂದು
ಚಿಚ್ಚಿಗುರುತಿರುವಂತೆ ಪ್ರತಿದಿನವು
ಮಕ್ಕಳ ನೆರೆಯೊಂದು ತೆರೆತೆರೆಯಾಗುತ
ಕ್ಷಣಕ್ಷಣಕು ಬರುತಿದೆ ಲೋಕದೊಳು
ಕೂಸುಗಳು ಸೂಸುವ ಏಾಸಲ-ಸಗೆಯಲ್ಲಿ
ಏಂದರು ಮಾಸಲು ಮನವುಳಿದಿರೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

ಸಂಸಾರಯಾತ್ರೆಯು ಸಾಗರದೊಡನಾಟ
ಲವಣೋದಧಿಯಲ್ಲಿ ಜಲ-ಪಯಣ ೬೫೦
ಎಲ್ಲಿಗೈತಂದರು ಬರದೊಂದು 'ಬಂದರು'
ಪೃಥ್ವಿಪ್ರದಕ್ಷಿಣೆಯೆ ನಿತ್ಯಕ್ರಮ
ಉರಗಾಳಿ ಬಿರುಮಳೆಗಳಿಗೆಲ್ಲ ಎದೆಗೊಟ್ಟು
ತಿಮಿಂತಿಮಿಂಗಲಗಳನೆದುರಿಸಿಯೂ
ಒಬ್ಬರನೊಬ್ಬರು ಕೊಂದು, ತಂತಮ್ಮವರ ತಿಂದು
ಕೊನೆಗೇನು ಹಡಗೊಡೆಯೆ ಜಲಮುಕ್ತಿಯು.

ಇರುಳೆಲ್ಲ ಸುಧೆ ಕುಡಿದು ಬೆಳ್ಳಿಬಟ್ಟಲು ಬೊಕ್ಕ-
ಬರಲಿಕ್ಕಿದೊಲು ಚಂದ್ರ ಪಡುವಲೊಳು
ಬಿದ್ದಾಗ ನಾನೆದ್ದೆ ನೆನಸಿದ್ದು ಕನಸಾಗಿ
ಹೋಗುತಿರುವುದ ಕಂಡು ಅರಮರುಳು ೬೬೦
ಆವರಿಸಿ ಡಾವರಿಸಿ ಜೀವವು ಹೇವರಿಸಿ
ಆದದ್ದ ಸ್ಮರಿಸ್ಮರಿಸಿ ಎನ್ನುತಿದೆ:
'ಜೀವನವೆ ಹೊಗೆಯಾಗಿ ಉಗಿಯಾಗಿಬ್ಬನಿಯಾಗಿ
ಮಂಜಾಗಿ ಮುಸುಕಾಗಿ ಹೋಗುತಿದೆ.'

ಗಾಳಿಗೆ ಗಾಳಿಯು, ಬಯಲಿಗೆ ಬಯಲು ಎಂ-
ದೆನ್ನುವ ಸುಡುಗಾಡಸಿದ್ಧರೊಲು
ಗುಡಿ ಹೋಯ್ತು ಹುಡಿಗೂಡಿ ಗಾಳಿಗೋಪುರ ಗಾಳಿ-
ಗೂಡಿತು ಮಾಟದ ಆಟದೊಲು;
ಮೂರ್ತಿಯು ಇಂಗಿತ್ತು ಮೈತ್ರಿಯು ಹಿಂಗಿತ್ತು
ಮನ ಕನಸ ನುಂಗಿತ್ತು ಒಂದಿರುಳೊಳೆ ೬೭೦
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

ಕೊನೆಗೊಮ್ಮೆ ಬರುವಂಥ ಕಾಳರಾತ್ರಿಯು ಬಂದು
ಹಗಲಿಗೆ ಇರುಳನು ಹೊದೆಯಿಸಿತು
ತಳ-ಪಾಯ ಅದುರಿತು, ಕೆಲಸವು ಕೆದರಿತು
ಗೆಳೆತನ ಮುದುರಿತು, ಮನ ಬೆದರಿತು
ಹನ್ನೆರಡು ವರುಷದ ತಪ ವಿಫಲವಾಯಿತೋ!
ಮಾಯೆಯು ಮುಯ್ಯಿಸಟ್ಟೆ ಕಟ್ಟಿದ್ದವೋ!
ದೈವದ ನಿಕಷಕೆ ಪೌರುಷವಿಳಿಯದೆ
ನಿಂತಂಥ ನೆಲವೆಲ್ಲ ನೀರಾಯಿತೋ! ೬೮೦

ಮಿಡಿತೆಯ ಉಪಟಳ ಹೊಲದುದ್ದ ಬರುವಂತೆ
ಬಂದಿತು ದುಃಖವು ದಂಡಿನೊಲು
ತೆನೆಗಳ ಚೆಂಡಾಡಿ, ಕಾಳುಗಳ ಚೆಲ್ಲಾಡಿ
ಕಣವನೆ ರಣ ಮಾಡಿ ನಗೆಯಾಡಿತು
ಸಾವು ಸಂಕಟಗಳು ನೋವು ನವೆದಾಟವು
ಒಟ್ಟಾಗಿ ನಿಂತವು ಬವಣೆಗಳು
ಸತ್ತ್ವಪರೀಕ್ಷೆಯ ಯಾವ ಅಧ್ಯಾಯವು
ಪ್ರಾರಂಭವಾಯಿತೊ ಇಂದೆಂ'ದೆನು.

ಕೆಲವೊಬ್ಬ ಗೆಳೆಯರ ವಿಶ್ವಾಸ, ಒಬ್ಬಿಬ್ಬ
ಗೆಳೆಯರ ನೆರೆಯೊಲವು ಕಾಯದಿರೆ ೬೯೦
ಆಗೀಗ ಸಖಿ ನೀನು ನಸುನಕ್ಕು ದುಃಖದಿ
ದುಃಖವ ಹಗುರಾಗಿ ಮಾಡದಿರೆ
ಕಾಯುವ ಕರುಳೊಂದು ಬೆಂಗಾವಲಿರದೆಯೆ
ದೇಶಾಂತರದಲ್ಲಿ ಬದುಕಿದೆನೇ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

ಪುಣೆಯಲ್ಲಿ ಕಳೆದಂಥ ಅಜ್ಞಾತವಾಸವ
ನೆನೆದರೆ ಮೈಯೆಲ್ಲ ಜುಮ್ಮೆನ್ನುತ
ಮುಗದದ ದಿನಗಳ ಮರೆಯಿಸಿ ಬಿಡುವವು
ನಿನ್ನ ನಿರಾಶೆಯು ಕೊನೆಮುಟ್ಟುತ ೭೦೦
ಜೀವದ ಬೇಸರ ನೆಲೆಯೂರಿ ನಿಂತಿತು
ನೀನೆನ್ನ ಕೈಬಿಟ್ಟೆ ಎಂದೆನಿಸಿತು
ಮಾಯಾಸಿದ್ಧಾಂತವು ನಿನ್ನಲ್ಲಿ ಜೀರ್ಣಿಟ್ಟು
ಕೂಡಿದ್ದು ಬಿಟ್ಟದ್ದು ಒಂದೆನಿಸಿತು.

'ಲಲಿತಾ' ಎಂದರೆ ನಾಲಿಗೆ ಈಗಲು
ರಸ ಒಸರುತ ಹಿಗ್ಗ ಬೀರುವದು
ಆ ಕೂಸ ಕಳಕೊಂಡು, ನೀನೆಂತೊ ಉಳಕೊಂಡು
ಲಾಲಿತ್ಯವಿಲ್ಲದ ಶೈಲಿಯೊಲು
'ಹೋ!' ಎಂದೆ, ಎದೆನೊಂದೆ ಬಚ್ಚಬರಿಗೈಯಿಂದೆ
ತೆರವೋ ತೆರವೆಂದೆ ಹಗಲಿರುಳು ೭೧೦
ನನ್ನ ಜೀವನದಲ್ಲಿ ಹೆಸರಲ್ಲೆ ನಿಂತಂಥ
ಸಂತಾನ ಒಂದಿದೆ ಎದೆ-ಮುಳುವು.

ಬಯಲ ಮಾಳಿಗೆಯಲ್ಲಿ ಬೆಳುದಿಂಗಳೊಳು ಕೂಡ
ಖಗ್ರಾಸದ ದಿನದ ಕತ್ತಲೆಯು
ಸುಂಗಿರ ಸಂವಾದದ ಹೊಳೆವಾದದ
ಉಪ್ಪು-ನೀರಿಗೆ ಬಂದು ಹಿಂಗುತಿರೆ
ಜೀವದ ಪಣ ಸೋತು, ಅಗ್ನಿದಿವ್ಯದ ಮಾತು
ನಾ ನೀನು ಆಡಿದ್ದು ನೆನಪಿದೆಯೇ?
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ! ೭೨೦

ಅಡ್ಡ ಜಂತಿಯು ಕೆಳಗೆ ಅಡ್ಡಾದವರಂತೆ
　　ಎದೆಭಾರ ಕನಸಲ್ಲು ನಿನಗೆನಿಸಿತ್ತು
ದುಸ್ವಪ್ನ-ರಾಕ್ಷಸಿ ದುರುಳತನದಿ ನಿನ್ನ
　　ಚಂಡಿ ಮಾಡುವರಂತೆ ಛಲ ತೊಟ್ಟಿತ್ತು
ನೋಡನೋಡುತ ಮುಗಿಲ ರೂಪವೆ ಮುರಿವಂತೆ
　　ನಿನ್ನ ಕನಸಿನ ಕಟ್ಟಡವೆ ಕಳಚಿತು
ಇದ್ದಕಿದ್ದೊಲು ನಿನಗೆ ಮೈಭಾರ, ಮನ ಶೂನ್ಯ
　　ಮಾತೆಲ್ಲ ಸೋತವರ ಉಸಿರಾಯಿತು.

ಹೆಣದ ತಂಗೈ ನನ್ನ ಮುಂಗೈಯ್ಯ ಹಿಡಿದಂತೆ
　　ನಿನ್ನ ಮಾತಿನ ಪಟ್ಟು ಮನಕೆನಿಸಿತು　　೭೩೦
ಎಳೆದೆನು, ಕೊಸರಿದೆ ಜಗ್ಗಾಡಿ ಸುಗ್ಗಾಡಿ
　　ತಪ್ಪಿಸಿಕೊಳಲು ಜೀವವು ಸರಳಿತು
ಪ್ರೇತದ ತಕ್ಕೆಯಲಿ ಸಿಕ್ಕ ಪ್ರೀತಿಗು ಹಾಗೆ
　　ಬಿಡಿಸಿಕೊಳ್ಳುವ ರೀತಿ ಬಗೆಹರಿಯದು
ಕೆಂಡದ ಮೈ-ಬೂದಿ ಅದನಲ್ಲೆ ಹುಗಿವಂತೆ
　　ಉತ್ಸಾಹ ಉಸಿರೊಳೆ ನನಗಡಗಿತು.

ಮುಗಿಯದೆನಿಸಿದ ಹಾಡು ಒಮ್ಮಿಗಿಲೆ ಮುಗಿತಾಯ
　　ಬಂದರೆ ಗಕ್ಕನೆ ತಡವರಿಸದೆ
ನಿಡಿದಾದ ದಾರಿಗ ಕಡುಬಂಡೆ ಕಂಡರೆ
　　ಬಂಡಿ ಬಂಡಿಯಲಲ್ಲೆ ಮುಗ್ಗರಿಸದೆ　　೭೪೦
ಆ ಕಣ್ಣು ಎಂದಾರೆ ಈ ಕಣ್ಣು ತಾಗಿದರೆ
　　ಗೊಂಬಿ ಮೂಡದ ಕುರುಡುಗಾಜಾಗಿರೆ
ನನಗೂ ನಿನಗೂ ಅಂಟಿದ ನಂಟಿನ
　　ಕೊನೆ ಬಲ್ಲವರಾರು ಕಾಮಾಕ್ಷಿಯೇ!

'ಸಾಕ್ಷಿಯಾಗುತ ಪುರುಷ ಈಕ್ಷಿಸಬಹುದೆಮ್ಮ
ಅಕ್ಷಿನಿಮೀಲನದೆದೆ ಮರುಳು
ಪ್ರಿಯಳ ಸಮಾಗಮ ನಿಮಗೊಂದು ನೋಟವು
ನಮಗದು ಸಮರಸ ಸಂಗಮವು
ನಿಮಗೇನು ರಮ್ಯತೆ ರಸಿಕಗೆ ಕರೆಯುವ
ನೂರು ಹಾದಿಯಳೊಂದು ಆದು ಹಾದಿಯು ೭೫೦
ನಮಗೆ ಜೀವನದಾಟ-ಪಾಟದ ನೋಟದ
ಬೇಟದ ಕೂಟದ ಸುಸಮಾಧಿಯು.'

'ಜೀವನ ರಣರಂಗ ನಮಗದೆ ನವರಂಗ
ಅಲ್ಲಿ ಸಾವಿನ ಸಂಗ ದಿನದಿನವು
ಆ ಶ್ರುತಿಗೆ ಜೀವಡೆವ ಪ್ರಾಣ-ಪ್ರಗಾಥಕೆ
ಆ ಮಹಾತಾಳ ಭಾವದ ಲಯವು
ನಮ್ಮ ಅಮೃತೇಶ್ವರನ ಗುಡಿ ಅಲ್ಲಿ, ನಮ್ಮಯ
ಪ್ರೇಮತರಂಗಿಣಿ ಮುಳುಗುವದು
ಭಂಗಿಗೆ ಭಣಿತಕ್ಕೆ, ಮಾತಿಗೆ ಮೌನಕ್ಕೆ
ಜನುಮಕ್ಕೆ ಮರಣಕ್ಕೆ, ಅದೆ ಎಡೆಯು.' ೭೬೦

'ನಿಮ್ಮ ಮಾತಿನ ರೀತಿ ಗಹನ ಗೀತಿಯು ಹಾಗೆ
ಅದರಿದಿರು ಈ ಪ್ರೀತಿ ಹುಸಿಗಾಳಿಯು
ನಿಮ್ಮ ಜೀವನ ರೀತಿ ಬೇಸಿಗೆಯ ಬಿರುಗಾಳಿ
ಅದರ ಸೆರಗಿಗೆ ನಾನು ಬರಿ ಗಾಳಿಯು'
'ಅಹಹಾ! ಜೀವದ ಗೆಳತಿ, ಜೀವನದ ಜೊತೆಗಾರ್ತಿ
ನೀನಿಲ್ಲದಾನಿಲಲು ನೆಲವಿದೆಯೇ?
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

'ಜೇಡದ ಬಲೆಯಾಗಿ ತೋರುತಿಹುದೀ ಪ್ರೇಮ
ಗಾಳಿಯು ಸೂಲೆತ್ತಿದದರೆಳೆಯು — ೭೭೦
ಪ್ರೇಮ-ಪ್ರಸಾರದ ಸ್ನೇಹದ ಸಾರದ
ಅಂಟಸಂಟಿಸುವದು, ಸುಡಿನೋಟವು
ಯಾರಿಗೂ ತೋರದ ಎತಕೂ ಬಾರದ
ಈ ಜಾಲ ಜಗದಗಲ ಬೀಸಿಹುದು
ಮರುಳಾದ ಸೊಣವನ್ನು ನೊಣೆಯೆ ಸಂಭ್ರಮವೆಷ್ಟು!
ಏಕಿಹುದೊ ನೂರಾರು ಕೈ ತೆರೆದು!'

ಹೀಗೆಂದು ಹಿಂಜರಿದು ನಿನ್ನೊಳಗೆ ಹುಗಿದಾಡಿ
ಕರುಳನೆ ಬಗೆದಾಡಿ ಕಂಗೆಡದೆ
ಕಣ್ಬಿಟ್ಟು ಕಗುಣೆಯಲಿ ಅರುಣ-ದೃಷ್ಟಿಯ ತೆರೆದು
ನೋಡು ನಸುಕು ಹರಿಯುವದೀಗಳೇ — ೭೮೦
ಭೀತಿಯ ಹುಟ್ಟಿಸುವ ಪ್ರೀತಿಯು ಪ್ರೀತಿಯೆ?
ಪ್ರೀತಿ ಭಕ್ಷಕನಲ್ಲ, ಅನ್ನವದು.
ರಕ್ಷಕ ಪ್ರೀತಿಯು ರಾಕ್ಷಸನೆಂಬರೆ?
ನಂಬದೆ ಪ್ರೀತಿಯು ಬಿಂಬವಸು.

ಜೀವನ-ದೀಪಕೆ ಎರೆದ ಸ್ನೇಹವದಾಗಿ
ನೆರೆವುದು ಬೇರೊಂದು ಜೀವನವು
ಬತ್ತಿಯು ಬತ್ತಿಸಗೊಡದಲೆ, ಸುಡುತಿರಲು
ಬೆಳಕಿನ ಕುಡಿಯಾಗಿ ಮೆರೆಯುವದು
ಜೀವನಿಗಾಧಾರ, ಜೀವನಾಮೃತಧಾರೆ
ಪ್ರೀತಿ ಜೀವದೊಳಾರೆ ಜೀವನವೇ? — ೭೯೦
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

'ನಿಮ್ಮ ಜೀವನಧ್ಯೇಯ ಗೌರಿಶಂಕರದಂತೆ
ಶಿಖರವನೆತ್ತಿದೆ ಮುಗಿಲಿನೆಡೆ
ನನ್ನದೆ ತಿರುಗಿದೆ ಗಂಗೆಯು ಹರಿದಂತೆ
ಜನರೀತಿಯಂತೆಯೆ ನೆಲದ ಕಡೆ
ನಿಮ್ಮದೆ ಕರಗಿದರೆ ನನಗೆ ನೀರೆರೆವುದು
ಚಳಿಗಾಳಿ ಬಂದಂತೆ ಕಲ್ಲಾಗಲು
ನಾ ತಣ್ಣಗಾಗುತ ನಡುಗುತ ಅಡಗಲು
ಓಡುವೆ ದಿಗ್ದೇಶಕೆಲ್ಲಾದರು.' ೮೦೦

"ಏನಿಕೆ!' ಎಂದೊಮ್ಮೆ ಸಲಿಗೆಯಲಾಡಿದ
ಸಲ್ಲಾಪ ಸರಸಗಳೆಲ್ಲಿ ಇವೆ?"
'ಯಾವುದೊ ಜನುಮದ ಕಥೆ ನೀವು ಹೇಳುವಿರಿ
ಸತ್ಯಯುಗವು ಹೋಗಿ 'ಕಲಿ' ಬಂದಿದೆ
ನಿಮ್ಮದೆ ಎತ್ತರಕೆ ನಾವೇನು ಬಂದೇವು?
ಕಲಿತವರ ಬೆಡಗಿಲ್ಲ ನಮ್ಮ ಕಡೆ;
ನಿಮ್ಮ ಕಣ್ಮುಂದೆಯೆ ಕಣ್ಮುಚ್ಚಿದರೆ ಸಾಕು
ಗೆದ್ದೆವು' ಎಂದೆ ನೀ ಕಣ್ಮುಚ್ಚಿಯೆ.

ಯಾವ ಪಾತಾಳಕ್ಕೆ ಇಳಿದಿತ್ತೊ ಆ ಮೌನ
ಪಾತಾಳಗರುಡಿಗು ಹತ್ತದಿದೆ ೮೧೦
ಸರಸ ವಿರಸವಾಗಿ ಮೌನ ನಿರಸವಾಗಿ
ಒಗಟೆಯಾಗುವ ಬಾಳು ಒಡೆಯದಿದೆ
ಝಲ್ಲೆಂದ ಹೃದಯದ ಜೊಳ್ಳು ನಾದವ ಕೇಳಿ
ಡಿಳ್ಳವಾಯಿತು ಬಾಳು ನಾನೆಂದೆನೇ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

‘ ನಿಮ್ಮ ಮಾತೇ ಬೇರೆ, ಮನ ಬೇರೆ, ಜನ ಬೇರೆ
ರಸ ರುಚಿ ಬೇರೆ, ಜೀವನ ಬೇರೆಯು
ನಿಮಗೆಮ್ಮ ಸಹವಾಸ ವನವಾಸದಂತೆಯು
ನಮ್ಮ ಹುಚ್ಚರ ಮಾತು ಹುಡುಗಾಟಿಗೆ ೮೨೦
ಗೆಳೆಯರ ಕೂಡಾಡಿ ಬಂದಾಗ, ನಾ ನಿಮ್ಮ
ಮುಖದಲುಕ್ಕುವ ಗೆಲುವ ಕಂಡಿಲ್ಲವೆ!
ಮನೆ ಬೆಳಕು ಮುಂದಿರೆ ಆ ಕಣ್ಣು ಕುಂದಿರೆ
ನಾನೊಳಗೆ ನೊಂದಿರೆ ನೀವರಿಯಿರೆ.

ಏಕೆಂದು—ಸಾಕೆಂದು—ಬೇಕೆಂದು—ನೂಕೆಂದು—
ರಮಿಸಲಾಡಿದಿರಲ್ಲ ನಿಮ್ಮಿಷ್ಟಕ್ಕೆ
ಗಂಗೆಯ ಕಷ್ಟವು ಗೌರಿಗೆ ತಿಳಿಯದು
ಹೆಂಗಸಿನ ಕಷ್ಟವು ಗಂಡಸಿಗೆ
ಎಂದಿಗು ತಿಳಿಯದು! ಏತಕೆ ತಿಳಿಯೋದು?
ದುಃಖವು ನಮ್ಮದು ನಮಗೆ ಇದೆ ’ ೮೩೦
ಎಂದು ನಿಟ್ಟುಸಿರಿಗೆ ಮಿಡಿದ ಕಂಬನಿ ಬಂದು
ಈ ಗಲ್ಲ ಸೋಕಲು ನಾ ನಡುಗಿದೆ..

‘ ತಂಪು ತಗ್ಗುತಿರಲಿ ಕಂಪು ಕಮ್ಮಯಿಸಲಿ
ಬಾಳದ ಬೇರಂತೆ ಬೇಸಿಗೆಗು
ನಿಮ್ಮ ಜೀವನದಲ್ಲಿ ಮಂಗಲವಾಗಲಿ
ಎಂದೆಂದು ’ ಕೊನೆಗೊಮ್ಮೆ ನೀನೆನ್ನಲು
ನನ್ನ ತಾಯಿಯ ನೆನೆದು ನಾ ಸುಮ್ಮನಾದೆನು
ಒಳಗೊಂದು ಹೊರಗೊಂದು ಜೀವಿಸಿದೆ.
ನನಗೂ ನಿನಗೂ ಅಂಟದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ! ೮೪೦

ಅಪ್ಪನಪ್ಪನ ಹಾಗೆ ಅಪ್ಪನೆ ಅಪ್ಪಂತೆ
ಚಿಕ್ಕಪ್ಪ ನೆರವಾಗಿ ನೆಲೆಗೊಟ್ಟನು
ಮಡದಿ ಮಕ್ಕಳ ಚಿಂತೆ ತನ್ನದೆ ಇರುವಂತೆ
ನನ್ನ ಭಾರದ ಪಂಥ ತಾ ತೊಟ್ಟನು
ವಿದ್ಯೆಯ ಹಸಿವಿನ್ನೂ ನನಗೆ ಹಿಂಗಿರಲಿಲ್ಲ
ಅದಕವಕಾಶವ ನನಗಿಟ್ಟನು
'ಅಯ್ಯೋ ದೇವರೆ!' ಎಂದು ಸಂಕಟಕೆ ಕೂಗಿದ್ದೆ
ಎನಿಸಿತ್ತು ಆ ದೇವನೋಗೊಟ್ಟನು.

ಎಳೆಗೆಳೆಯರೊಡನಾಟ ಅಲ್ಲಿ ದೊರಕಿತ್ತೆನಗೆ
ಮತ್ತೊಮ್ಮೆ ಮುಂಜೊಮ್ಮೆ ನನಗಾದೊಲು ೮೫೦
ಹರೆ ಮರಳಿ ಬಂದಂತೆ ಹುರಿದುಂಬಿತೆನ್ನೆದೆ
ಅವರ ಸಮಸ್ಯೆಗೆ ಸಮರಸನು
ನಾನಾಗೆ, ತಾನಾಗಿ ಹುಡುಗ-ಪ್ರಾಯದ ಹುಚ್ಚು
ಕನವರಿಕೆ ನನವರಿಕೆಗಳ ಕಂಡೆನು
ಅವರನುಭವದಲ್ಲಿ ನವಭವ ಪಡೆದಂತೆ
ಮೊದಲು ಕಂಡಿರದನ್ನು ನಾನುಂಡೆನು.

ಗೆಳೆತನದ ಹೊಸ ಹೊಳವು, ನನ್ನ ಕನ್ನಡ ಕುಲದ
ಕಣಸೊಂದು ಹೊಳೆದಾಡಿ ನೆಳೆದಾಡಿತು
ಹೊಸ ಗೆಳೆಯನೊಬ್ಬನ ಎಡೆಬಿಡದ ಸಹವಾಸ
ಆ ಕಣಸ ಕನ್ನಡಿ ತೊಳೆದಾಡಿತು ೮೬೦
ಕಣ್ಣನು ತಿದ್ದೀತು ಮುನ್ನಡೆಯೆಂದೀತು
ಮುಂದೆನ್ನುತಿರುವಾಗ ಮುಗ್ಗರಿಸಿತೇ!
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

ಎರಡು ವರ್ಷಗಳಂತು ಎರಡು ನಿಮಿಷಗಳಂತೆ
ಕಣ್ಣು ತೆರೆವುದರೊಳಗೆ ತಾ ಕಳೆದವು
ನೆಲೆಯಾದ ದೈವವು ತಪ್ಪಿತೊ ತಪ್ಪಿತು !
ಸಂಜೆ ಕಾವಳ ಕಣ್ಣನಣಕಿಸೀತು
ನನ್ನೆದೆಯನಿರಿದಾಡಿ ಮಿದುಳನ್ನು ಅರೆದಾಡಿ
ಜೀವನವ ನೊರೆದಾಡಿ ಬಯಲಾಯಿತು ೮೭೦
ಮುಂದೇನು ? ಎನುವಾಗ ಮುಂದೊಂದು ಕೈ ಬಂತು
ದೈವದ ಕೈಯೆಂದು ಅದ ತಿಳಿದೆನು.

ಕತ್ತಲೆಯ ಗರ್ಭದ ತೇಜದ ಕಳೆಯೊಂದು
ದಿನತುಂಬಿ ಪಡೆದಂತೆ ಆ ಬೆಳಕು
ಮುಂದಿನ ಹಗಲಿನ ಮುಂಬೆಳಕಾದಂತೆ
ಅರಳುವೊಗ್ಗಿಯ ಅಂದದಲಿ ಸಿಂದಿತು
'ಪಾಕ ಹೊಂದಿದ ಪ್ರಕೃತಿ ಪ್ರೇಮದಿ ಪರಿಣಮಿಸಿ
ಜೀವನ ದೇವನ ಮಾಡುವುದು
ಕಲಿಕೆಯ ಮಾತಲ್ಲ, ವಾದದ ಫಲವಲ್ಲ
ಅದೃಷ್ಟವಶವಲ್ಲ, ಎದೆಯೊಲವು' ೮೮೦

ಹೀಗೆಂದು ಹೇಳಿತು ಅವನ ನಡೆನುಡಿ ನನಗೆ
ಕತ್ತಲೆಯಲಾಯಿತು ಕೈದೀಪವು
ಮೈತ್ರಿಯ ಲೋಕದ ಮಿತ್ರನುದಯದ ಕಾಲ
ಹೊಸಬಾಳ ಬದುಕಿಗೆ ಕರೆಯುವುದು
ಕೊಂಕಣದ ಕಡಲಲ್ಲಿ ತೇಂಕಾಡಿ ಬಂದೆವು
ನಡೆ ಗೆಳತಿ, ಧೀಂಕಿಟ್ಟು ಕನ್ನಡಕೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ !

ಎಂದಿನಿಂದಲೊ ಏನೊ ಒಳಗೊಂದು ಸಖ-ಜೀವ
'ಸಖಿ! ಬಾರೆ ಬಾ!' ಎಂದು ಕೂಗುತಿದೆ ೮೯೦
'ಮುಂದಿನ ಪಥದಲಿ ಸಖಿಯಾಗು ಬಾ' ಎಂದು
ನನ್ನ ಮನೋರಥ ಸೂಗುತಿದೆ.
ಬಾನಿಂದ ಬಾನಿಗೆ ಹಾಡಿನ ತಾನೊಂದು
ಸಖಿ-ಸಖಿ-ಸಖಿಯೆಂದು ತೂಗುತಿದೆ
'ನಾನೂ ನೀನೂ ಸಖ-ಸಖಿ ಸಮ-ಸುಖಿ'
ಎಂದೆನುತ ಮುಂದಕೆ ಹೋಗುತಿದೆ.

ಅನ್ನಕೆ ಬಾಳಾಗಿ ಕಾಮಕೆ ಹೋಳಾಗಿ
ಮಾನಕೆ ಆಳಾಗಿ ಉಸಿರೆಳೆದುದು
ಬಾಳಲ್ಲ ಬದುಕಲ್ಲ; ಜೀವ ಜೀವಕೆ ಉ-
ದ್ದೀಪನವಾದುದೆ ಜೀವನವು. ೯೦೦
ಅದು ಇದೆ ಎದೆಯಲ್ಲಿ, ಬೆಳಕಿನ ಬದಿಯಲ್ಲಿ
ರಸಗಂಗಾನದಿಯಲ್ಲಿ ಅದರುಗಮ
ಹೆಸರದಕೆ ಪ್ರೀತಿಯು, ಹಿಗ್ಗಿನ ರೀತಿಯು
ಆತ್ಮದ ನೀತಿಯು ಮಧುಸಂಗಮ.

ಕಂಗಳು ಬಂಭ್ರಮಿಸಿ, ಹಮ್ಮುಕ್ಕಿ ಜಂಗಮಿಸಿ
ಎದೆ-ಮೊಗ ಕೆಳಗಿಳಿಸಿ ನೋಡುತಿರೆ
ಭ್ರಮರ ಭ್ರಮರಿಯನೆಳೆಸಿ, ಹಂಸ ಹಂಸಿಯ ಬಳಸಿ
ಕಮಲ ಕಮಲಿನಿಗೊಲಿದು ಬೇಡುತಿದೆ
ನಾಗದ ಸೆಳೆಮಿಂಚು, ಸಮತೆಯ ಗೆಳೆಸಂಚು
ಎಸಳಿನ ಎಳೆಯಂಚು ಎಳೆದೀತೆನೇ ೯೧೦
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!

ಒಲ್ಲೆ ಒಲ್ಲೆಂದರು ಒಲ್ಲೆಯ ಮಾತಿವು
ಲಾಲಿತ್ಯವನುಸರಿಸಿ ಎಲೆ ಲಲನೆ!
ದೇಸಿಯ ನುಡಿಗೊಪ್ಪು ದೇಸಿಯ ಛಂದದಿ
ನವನಾಗಬಂಧದಿ ಇವು ಬಿಗಿದಿವೆ
ನೇತಿಯೆನ್ನುವ ಪ್ರೀತಿ ನೀತಿಯ ಧ್ವನಿದೋರಿ
ಸ್ವಾತಂತ್ರ್ಯವನು ಬೀರಿ ಹರಿದಾಡಿದೆ
ಮನದ ಚಾಂಚಲ್ಯದ ಸಂಚಾರ ಚಿತ್ರದ
ಸ್ಥಾಯಿಗೆ ರಸಭಾವಗಳನೆರೆದಿದೆ. ೯೨೦

ಗರತಿಯರೆದೆಮಾತು, ನೆರೆಮಾತುಗಳ ಬೆರೆತು
ಲಾವಣಿಯಲಂಕಾರದಲಿ ಹೊಂದಿದೆ
ಪಂಡಿತ ಪಾಮರರಿಬ್ಬರ ನಾಲಿಗೆ-
ಯೊಳು ಒಡಂಬಡುವಂತೆ ರಂಜಿಸಿದೆ
ನುಡಿನುಡಿಗು ರಸ ಒಸರಿ, ರಸಗಬ್ಬಿಗಿದು ಸರಿ
ನುರಿಸಿ ಹೀರಲು ನೀರು ಏರುತಿದೆ
ಪ್ರೇಮರಸಾಯನ, ಹೃದಯಕಮೃತ-ಪಾನ
ಜೀವಕಾಪ್ಯಾಯನವಾಗುತಿದೆ.

ಚಿತ್ರದ ಸೂತ್ರಕೆ ಬುದ್ಧಿಯ ಹುರಿಹಾಕಿ
ಹಮ್ಮಿನ ಮುರಿಹಾಕಿ ಮನ ಹೆಣೆದಿರೆ ೯೩೦
ಅಂತಃಕರಣದ ಗೋಪು ಭಾವದ ಕೋಪು
ಎಲ್ಲರ ಕೊರಳೆದೆ ಸಿಂಗರಿಸಿದೆ
ಏಕಾಂತದ ಜಿಸುಗು ಲೋಕಾಂತಕೆಳೆಯಿತು
ಜನವು ಜನಾರ್ದನನೆಂದರಿತೇ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ!